ಆಷಾಢ ೧೮೮೨ ( ASADHA 1882 )
ಜುಲೈ ೧೯೬೦ ( JULY 1960 )

# Three Basic Institutions
( Kannada )

ಪ್ರಕಾಶಕರು
ಭಾರತ ಸರಕಾರದ ಸಮಾಚಾರ ಮತ್ತು ಪ್ರಸಾರ ಸಚಿವಾಲಯದ ಪ್ರಕಾಶನ
ವಿಭಾಗದ ಮುಖ್ಯಾಧಿಕಾರಿಗಳು

ಮುದ್ರಕರು :
ಹ. ರಾ. ಪುರೋಹಿತ, ಸಂಯುಕ್ತ ಕರ್ನಾಟಕ ಮುದ್ರಣಾಲಯ,
ಕೊಪ್ಪೀಕರ ರೋಡ, ಹುಬ್ಬಳ್ಳಿ

# ನೂರು ಮೂಲ ಸಂಸ್ಥೆಗಳು




ಭಾರತ ಸರಕಾರದ
ಸಮಾಜವಿಕಾಸ ಮತ್ತು ಸಹಕಾರ ಸಚಿವಾಲಯದ
ಪರವಾಗಿ ಪ್ರಕಟವಾಗಿದೆ.

"ಪ್ರತಿ ಹಳ್ಳಿಗೂ ಒಂದು ಪಂಚಾಯತಿ, ಒಂದು ಸಹಕಾರಿ ಸಂಘ,
ಒಂದು ಶಾಲೆ ಹೀಗೆ ಮೂರು ಸಂಸ್ಥೆಗಳಿರಬೇಕು. ಆಗ
ತಾನೇ ದೇಶದ ಅಸ್ತಿವಾರ ದೃಢವಾಗುವದು."

— ಜವಾಹರಲಾಲ ನೆಹರು

## ವಿಷಯಗಳು

# ಪಂಚಾಯತಿ

ಹಳ್ಳಿಯ ಯೋಗಕ್ಷೇಮ ನೋಡಿಕೊಳ್ಳಲು ಆರಿಸಿದ ಐವರು ಹಿರಿಯರ ಸಮಿತಿಯೇ ಪಂಚಾಯತಿ. ಹಿಂದೆ ಇದರ ಅರ್ಥ ಹೇಗಿದ್ದರೂ ಈಗ ಪಂಚಾಯತಿಯೆಂದರೆ ಐವರು ಮಾತ್ರ ಇರಬೇಕೆಂಬ ನಿಯಮವಿಲ್ಲ. ಹಳ್ಳಿಯ ಜನಸಂಖ್ಯೆಗೆ ಅನುಸಾರವಾಗಿ ಇದರಲ್ಲಿ ಹೆಚ್ಚು ಸದಸ್ಯರಿರಬಹುದು. ಪಂಚಾಯತಿಯ ಮುಖ್ಯಸ್ಥನೇ ಅಧ್ಯಕ್ಷ. ಹಿಂದಿಯಲ್ಲಿ ಇವನನ್ನು ಸರ್‌ಪಂಚ್ ಎನ್ನುತ್ತಾರೆ. ಸದಸ್ಯರನ್ನು ಪಂಚರು ಎನ್ನುತ್ತಾರೆ.

ನಮ್ಮ ದೇಶದ ಹಳೆ ಹಳ್ಳಿ ಹೆಚ್ಚು ಕಡಮೆ ಸ್ವಯಂ ಪೂರ್ಣವಾಗಿತ್ತು. ಒಂದು ಚಿಕ್ಕ ಗಣರಾಜ್ಯವಾಗಿತ್ತು. ಅದು ತನಗೆ ಬೇಕಾದ ಆಹಾರಧಾನ್ಯಗಳನ್ನು ಬೆಳೆಯುತ್ತಿತ್ತು. ಬಟ್ಟೆಬರೆಗಳನ್ನು ಒದಗಿಸಿಕೊಳ್ಳುತ್ತಿತ್ತು. ತನ್ನ ವಿಷಯಗಳನ್ನು ತಾನೇ ನೋಡಿಕೊಳ್ಳುತ್ತಿತ್ತು. ಹಳ್ಳಿಗರಿಗೆ ತೃಪ್ತಿಯಾಗುವಂತೆ ನ್ಯಾಯಪರಿಪಾಲನೆ ಮಾಡುತ್ತಿತ್ತು. ಸಮಾಜದ ಸರ್ವತೋಮುಖವಾದ ಅಭಿವೃದ್ಧಿಗೆ, ಶಾಂತಿ, ಶಿಸ್ತು, ಸುಖಗಳ ಬಗ್ಗೆ ಪಂಚಾಯತಿ ಜವಾಬ್ದಾರಿಯಾಗಿತ್ತು. ಐವರು ಪಂಚಾಯತಿದಾರರು ತೀರ್ಮಾನಿಸಿದ ಮೇಲೆ ಆಕ್ಷೇಪಿಸುವುದು ತೀರಾ ಅಪೂರ್ವ.

## ಬ್ರಿಟಿಷರ ಕಾಲದಲ್ಲಿ

ಬ್ರಿಟಿಷರ ಕಾಲದಲ್ಲಿ ಪಂಚಾಯತಿ ತನ್ನ ಶಕ್ತಿ ಗೌರವಗಳನ್ನು ಕಳಕೊಂಡಿತು. ಆಡಳಿತೆ ಹಾಗೂ ನ್ಯಾಯಪರಿಪಾಲನೆ ಕೇಂದ್ರೀಕೃತವಾಯಿತು. ಭೂ-ಹಿಡುವಳಿಗಳ ಹೊಸ ಪದ್ಧತಿಯಿಂದ ಜನರು ಒಂದಾಗಿ ತಮ್ಮ ರಾಜ ಹಾಗೂ ರಾಜಪ್ರತಿನಿಧಿಗಳೊಡನೆ ವ್ಯವಹರಿಸುವದಕ್ಕಿಂತಲೂ ವೈಯಕ್ತಿಕವಾಗಿ ಹೆಚ್ಚು ಸಂಬಂಧ ಕಲ್ಪಿಸಿಕೊಂಡರು. ಸಾರಿಗೆ ಸಂಪರ್ಕಗಳು ಹೆಚ್ಚಿದಂತೆ, ಪಶ್ಚಿಮ ದೇಶಗಳಲ್ಲಿ ಔದ್ಯೋಗಿಕ ಕ್ರಾಂತಿ ಹೆಚ್ಚಿದಂತೆ ಪಂಚಾಯತಿಗಳು ಇನ್ನಷ್ಟು ಬೇಗ ನಾಶವಾದುವು.

ಬರಬರುತ್ತಾ ಪಂಚಾಯತಿ ಸತ್ತು ಹಳತಾಯಿತು. ಆದರೆ ಪಾಶ್ಚಾತ್ಯ ವಿದ್ಯಾಭ್ಯಾಸದ ಪ್ರಸಾರ ಪಟ್ಟಣಿಗರಲ್ಲಿ ರಾಜಕೀಯ ಜಾಗೃತಿಯನ್ನುಂಟು ಮಾಡಿತು. ಜನರಿಗೆ ಸರಕಾರದೊಡನೆ ಸಹಕರಿಸುವ ಇಚ್ಛೆ ಹುಟ್ಟಿತು. ಇದರಿಂದ ಸ್ವಯಂ ಸರಕಾರ ಪ್ರಾರಂಭವಾಯಿತು. ಸ್ಥಳೀಕ ಸಂಸ್ಥೆ ಹಾಗೂ ನಗರಸಭೆಗಳ ಏರ್ಪಾಡಾಯಿತು. ಪ್ರಜಾಪ್ರಭುತ್ವ ತತ್ವದ ಆಧಾರದಲ್ಲಿ ಈ ಸಂಸ್ಥೆಗಳು ಬ್ರಿಟಿಷರ ಮಾದರಿಯನ್ನು ಅನುಸರಿಸಿದವು. ಕೆಲವು ಕಾಲದ ಮೇಲೆ ಸ್ವಯಂ ಸರಕಾರದ ಈ ಪ್ರಯೋಗ ಪಂಚಾಯತಿರೂಪದಲ್ಲಿ ಹಳ್ಳಿಗಳಿಗೂ ತಲುಪಿತು.

ಈಗ ಪಂಚಾಯತಿ ನಗರಕ್ಕೆ ಸಂಬಧಿಸಿದ ಕೆಲಸಗಳನ್ನು ಮಾತ್ರ ನಿರ್ವಹಿಸಬೇಕಾಗಿತ್ತು. ಪಂಚಾಯತಿಶಾಸನಕ್ಕೆ ಸಹ ನಗರಸಭೆಯ ಶಾಸನವೇ ಸ್ಫೂರ್ತಿಕೊಟ್ಟಿತ್ತು. ಗ್ರಾಮಜೀವನಕ್ಕೆ ಇದು ಸಂಪೂರ್ಣ ಅನ್ವಯಿಸಿದ್ದಿಲ್ಲ. ಇದು ಜನರ ಇಚ್ಛೆಯನ್ನು ಪ್ರತಿನಿಧೀಕರಿಸುತ್ತಿದ್ದಿಲ್ಲ. ಇದರಿಂದ ಇದಕ್ಕೆ ಸಹಜವಾದ ಬಲವಿದ್ದಿಲ್ಲ.

ಆದಾಗ್ಯೂ ಈ ಹೊಸ ಸಂಸ್ಥೆಯಲ್ಲಿ ಕೆಲಸಮಾಡುವವರು ಸರಕಾರವನ್ನು ತುಂಬ ಆಶ್ರಯಿಸುತ್ತಿದ್ದರು. ಸ್ವಯಂ ಸಹಾಯ, ಸ್ವಾವಲಂಬತನ ಇವೇ ಪಂಚಾಯತಿಯ ಎರಡು ಗಾಲಿಗಳು. ಇವೇ ಇದಕ್ಕೆ ಇದ್ದಿಲ್ಲ. ತಮ್ಮ ಸಮಸ್ಯೆಗಳನ್ನು ಜನರು ತಾವೇ ಬಗೆಹರೆಸಿಕೊಳ್ಳುವುದರ ಬದಲು ಸರಕಾರಿ ಅಧಿಕಾರಿಗಳ ಕಡೆಗೆ ನೋಡುತ್ತಿದ್ದರು.

ಈ ಸಂಸ್ಥೆಗಳು ಒಂದಕ್ಕೊಂದು ಸಂಬಂಧವಿಲ್ಲದೆ ಕೆಲಸಮಾಡುತ್ತಿದ್ದವು. ಇದು ಇವುಗಳ ಅವನತಿಗೊಂದು ಕಾರಣ. ಮೇಲಿನ ಸಂಸ್ಥೆಗಳು ದಾರಿತೋರಿಸುತ್ತಿದ್ದಿಲ್ಲ. ಮೇಲ್ವಿಚಾರಣೆ ನಡೆಸುತ್ತಿದ್ದಿಲ್ಲ. ಪ್ರತಿಯೊಂದು ಸಂಸ್ಥೆಯೂ ತನ್ನದೇ ಆದ ಕ್ಷೇತ್ರದಲ್ಲಿದ್ದು ಇತರ ಕ್ಷೇತ್ರಗಳ ಚಟುವಟಿಕೆಗಳೊಡನೆ ಸಂಬಂಧವಿಲ್ಲದಿದ್ದಂತೆ ಕೆಲಸ ಮಾಡುತ್ತಿತ್ತು.

## ಸ್ವಾತಂತ್ರ್ಯದ ಬಳಿಕ

ಸಂವಿಧಾನ ಘಟನಾ ಸಭೆಯ ನಮ್ಮ ಚುನಾಯಿತ ಪ್ರತಿನಿಧಿಗಳು ಸಂವಿಧಾನವನ್ನು ತಯಾರಿಸಿದರು. ದೇಶವನ್ನು ಗಣರಾಜ್ಯವೆಂದು ಘೋಷಿ

ಸಲಾಯಿತು. ಸಂವಿಧಾನದ ಲೇಖಳಂ ರಲ್ಲಿ " ರಾಜ್ಯ ಗ್ರಾಮಪಂಚಾಯತಿಗಳ ಸ್ಥಾಪನೆಗೆ ಚರ್ಯೆತೆಕ್ಕೊಳ್ಳಬೇಕಲ್ಲದೆ ಈ ಪಂಚಾಯತಿಗಳಿಗೆ ಸ್ವಯಂ ಸರಕಾರದ ಘಟಕಗಳಾಗಿ ಕೆಲಸ ಮಾಡಲು ಬೇಕಾದ ಅಧಿಕಾ ನೀಡಬೇಕು " ಎಂದಿದೆ. ಇನ್ನೊಂದು ರೀತಿಯಲ್ಲಿ ಪಂಚಾಯತಿಯೆಂದರೆ ಸಮಾಜದ ಬಗ್ಗೆ ಪ್ರಗತಿಶೀಲವಾದ ಸಾಮಾಜಿಕ ಆರ್ಥಿಕ ಕಾರ್ಯಕ್ರಮವನ್ನು ಜಾರಿಗೆ ತರಲು ಬೇಕಾದ ಅಧಿಕಾರ ಸಾಧನ ಸಂಪತ್ತುಗಳುಳ್ಳ ವಿಕೇಂದ್ರೀಕೃತವಾದ ಆಡಳಿತೆಯ ಘಟಕ ಎನ್ನಬಹುದು.

ಸ್ವಾತಂತ್ರ್ಯ ಬಂದ ಮೇಲೆ ಸ್ವಾಂತಂತ್ರ್ಯ ಚಳವಳದಲ್ಲಿ ಭಾಗವಹಿಸಿದ ಕೆಲವರು ಪಾರ್ಲಿಮೆಂಟು ಮತ್ತು ರಾಜ್ಯ ಶಾಸನಸಭೆಗಳನ್ನು ನಡೆಸುವ ಹೊರೆ ಹೊತ್ತರು. ಆದಕಾರಣ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಕೆಲಸ ಮಾಡಲು, ಜನತೆಯಲ್ಲಿ ಅನೇಕ ವರ್ಷಗಳಿಂದ ಪ್ರಜಾಪ್ರಭುತ್ವದ ಜಾಗೃತಿಯಿದ್ದರೂ ಹಳ್ಳಿಗಳಲ್ಲಿರುವ ಅಸಂಖ್ಯಾತ ಜನರ ವರೆಗೆ ಇದು ಇಳಿದು ಬಂದಿಲ್ಲವೆಂದು ಒಪ್ಪಿಕೊಳ್ಳಬೇಕಾಗಿದೆ. ಇವರನ್ನು ಎಚ್ಚರಗೊಳಿಸಬೇಕು.



ನಿಜವಾದ ಮಣ್ಣಿನಲ್ಲಿ ಮಾತ್ರ ಗಿಡ ಬೆಳೆಯುವಂತೆ ಪ್ರಜಾಪ್ರಭುತ್ವವೂ ಅದಕ್ಕೆ ಯೋಗ್ಯವಾದ ವ್ಯಕ್ತಿಗಳಲ್ಲಿ ಮಾತ್ರ ಅಭಿವೃದ್ಧಿ ಹೊಂದಬಲ್ಲುದು.

ಇದರ ಬೇರು ಹಳ್ಳಿಗಳಲ್ಲಿ ದೃಢವಾಗಬೇಕು. ಇದರ ಬಗ್ಗೆ ಕೆಲಸ ಮಾಡು ವವರೇ ಇದನ್ನು ಚೆನ್ನಾಗಿ ಪೋಷಿಸತಕ್ಕವರು. ಹಳ್ಳಿಗರ ಅದೃಷ್ಟ ಅವರ ಕೈಯಲ್ಲಿರಬೇಕು. ಅವರ ಹಕ್ಕುಬಾಧ್ಯತೆಗಳನ್ನು ಅವರು ಚೆನ್ನಾಗಿ ತಿಳಿದಿರಬೇಕು. ಆಗತಾನೇ ಅವರು ತಮ್ಮ ಜೀವನವನ್ನು ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಸಾಗಿಸಿ ಅದರಿಂದ ಅತ್ಯುತ್ತಮ ಪ್ರತಿಫಲ ಪಡೆಯಬಲ್ಲರು.

## ಪಂಚಾಯತಿ : ಮೂಲ ಸಂಸ್ಥೆ

ಜನರಿಗೆ ಅಂಥ ಉತ್ಕಟವಾದ ಇಚ್ಛೆಯಿದೆಯೆಂಬುವಕ್ಕೆ ಈಗ ಸಾಕ್ಷಿ ಇದೆ. 'ಪ್ರಾತಿನಿಧ್ಯವಿಲ್ಲವೆ ತೆರಿಗೆ ಹೊರಿಸಕೂಡದು' ಎಂಬ ವೀರಘೋಷ ಹಳ್ಳಿಗಳಲ್ಲಿ ಹೆಚ್ಚುತ್ತಿದೆ. ಇದರಿಂದಾಗಿ ಪ್ರಜಾಪ್ರಭುತ್ವೀಕರಣ ಅಂದರೆ ಪಂಚಾಯತಿಗಳಿಗೆ ಅಧಿಕಾರ ಕೊಡುವ ವಿಚಾರ ಮಾಡುತ್ತಿದ್ದೇವೆ. ಕೆಲವು ರಾಜ್ಯಗಳಲ್ಲಿ ಈಗಾಗಲೇ ಈ ವಿಷಯದಲ್ಲಿ ಕೆಲಸ ನಡೆದಿದೆ.

ಜನರಿಗೆ ತಮ್ಮ ಇಚ್ಛೆಯಂತೆ ನಡೆದು ಜವಾಬ್ದಾರಿಯಲ್ಲಿ ಪಾಲುಗೊಳ್ಳಲು ಅವಕಾಶ ಕೊಡುವ ಮೂಲ ಸಂಸ್ಥೆಯೇ ಪಂಚಾಯತಿ. ಇದರ ಸದಸ್ಯರನ್ನು ವಯಸ್ಕರ ಮತದಾನ ಪದ್ಧತಿಯಿಂದ ಚುನಾಯಿಸಲಾಗುತ್ತದೆ. ಪಂಚಾಯತಿ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸಲು ಜನರಿಗೆ ಪ್ರೋತ್ಸಾಹಿಸಲಾಗುತ್ತದೆ. ಯಾವದಾದರೊಂದು ರೀತಿಯಿಂದ ತಮಗೆ ಲಾಭವಿಲ್ಲದೆ ಜನ ಅವರಲ್ಲಿ ಆಸಕ್ತಿ ವಹಿಸುವುದು ಕಷ್ಟ. ಆದರೂ ಪ್ರಜಾಪ್ರಭುತ್ವ ಸಾರ್ಥಕವಾಗಬೇಕಾದರೆ ಪ್ರತಿಯೊಬ್ಬನ ಜೀವನದ ಹಾದಿ ಪಂಚಾಯತಿ ಆಗಿರಬೇಕು.

## ಕಾರ್ಯಕಾರಿ ಸಂಸ್ಥೆಗಳೂ ಉಪಸಮಿತಿಗಳೂ

ಹಳ್ಳಿಗಳಲ್ಲಿ ಸ್ಪರ್ಧೆಯಿಂದ ಆದರೂ ಪೂರಕವಾಗಿ ಕೆಲಸ ಮಾಡುವ ಕಾರ್ಯಕಾರಿ ಸಂಸ್ಥೆಗಳನ್ನು ಸಮಾಜ ವಿಕಾಸ ಕಾರ್ಯಕ್ರಮ ಸದಾ ನಿರೀಕ್ಷಿಸುತ್ತದೆ. ಅನೇಕ ಹಳ್ಳಿಗಳಲ್ಲಿ ಇಂಥ ಸಂಸ್ಥೆಗಳು ಈಗಾಗಲೇ ಕೆಲಸ ಮಾಡುತ್ತಿವೆ. ಕಿಶನ್ ಮಂಡಲ, ಬಾಲಮಂಡಲ, ಯುವಕ ಮಂಡಲ, ಮಹಿಳಾ ಮಂಡಲ ಇತ್ಯಾದಿಗಳೇ ಇಂಥ ಸಂಸ್ಥೆಗಳು. ಆಡಳಿತೆ

ಯೋಜನೆ ಮೊದಲ್ಗೊಂಡು, ನಾಟಕ, ಭಜನೆ, ಹರಿಕತೆ, ಸಂಗೀತ, ಸಾಹಿತ್ಯಾಭ್ಯಾಸ ಇತ್ಯಾದಿ ಎಲ್ಲ ಚಟುವಟಿಕೆಗಳನ್ನು ಈ ಸಂಸ್ಥೆಗಳಿಗೆ ಒಪ್ಪಿಸಬಹುದು.

ಹಳ್ಳಿಯ ಅಭಿವೃದ್ಧಿಯ ಮೊದಲ ಜವಾಬ್ದಾರಿಕೆ ಪಂಚಾಯತಿಯದ್ದು. ಆದರೆ ಹಳ್ಳಿಗಳಲ್ಲಿ ಅನುಭವಶಾಲಿಗಳೂ ಜ್ಞಾನಿಗಳೂ ಸಮರ್ಥರೂ ಇದ್ದಾರೆ. ಇವರೂ ಸಾಮಾನ್ಯವಾಗಿ ಚುನಾವಣೆಗೆ ನಿಲ್ಲುವದಿಲ್ಲ. ಇಂತಹರನ್ನು ಜನತಾ ಸಹಾಯಕರೆಂದು ಕರೆಯಬಹುದು. ಇಂಥವರಿಗೆ ಗ್ರಾಮ ಸಹಾಯಕರೆಂದು ಇವರಿಗೆ ಇಷ್ಟವುಳ್ಳ ವಿಷಯದಲ್ಲಿ ತರಬೇತಿ ಕೊಡಲಾಗುತ್ತಿದೆ. ಇವರು ವಿವಿಧ ಕ್ಷೇತ್ರಗಳಲ್ಲಿ ಪಡೆದ ಹೆಚ್ಚಿನ ತಿಳುವಳಿಕೆಯನ್ನು ಸಮಾಜದ ಹಿತಕ್ಕಾಗಿ ಉಪಯೋಗಿಸಬಲ್ಲರು. ಇವರು ಪಂಚಾಯತಿಗಳಿಗೆ ಅಭಿವೃದ್ಧಿ ಕೆಲಸಗಳಲ್ಲಿ ಸಹಾಯ ಮಾಡುವರು. ಪ್ರತಿ ಹಳ್ಳಿಯಿಂದಲೂ ಇಂಥ ಸಹಾಯಕರನ್ನು ಆರಿಸಿಕೊಳ್ಳಲಾಗುವುದು. ಇವರಿಗೆ ಬೇಸಾಯ ಮತ್ತು ಇತರ ವಿಷಯಗಳಲ್ಲಿ ತರಬೇತಿ ಕೊಡಲಾಗುವುದು. ಇಂಥ ಸಾವಿರಾರು ಸಹಾಯಕರನ್ನು ನೂರಾರು ಶಿಬಿರಗಳಲ್ಲಿ ತರಬೇತಿಗೊಳಿಸಲಾಗಿದೆ. ಇವರು ಬೇಸಾಯ, ಪಶುಪಾಲನೆ, ಚಿಕ್ಕ ನೀರಾವರಿ, ಗ್ರಾಮ ಕೈಗಾರಿಕೆ, ಆರೋಗ್ಯ, ವಿದ್ಯಾಭ್ಯಾಸ ಇತ್ಯಾದಿ ತಮತಮಗೆ ಇಷ್ಟವಾದ ವಿಷಯಗಳನ್ನು ನೋಡಿಕೊಳ್ಳುವರು.

## ಪಂಚಾಯತಿಗಳ ವಿಸ್ತರಣ

ಕ್ರಿಯಾತ್ಮಕ ಉಪಸಮಿತಿಗಳು ತಾಂತ್ರಿಕ ಸಹಾಯ ಮತ್ತು ಅಭಿವೃದ್ಧಿಕಾರ್ಯಗಳನ್ನು ತ್ವರಿತಗೊಳಿಸುವದರಲ್ಲಿ ಮಾತ್ರವಲ್ಲ, ಪಂಚಾಯತಿಯನ್ನು ಹೆಚ್ಚು ಪ್ರತಿನಿಧೀಕರಿಸುವಂತೆಯೂ ಮಾಡಬಲ್ಲುವು. ಹಳ್ಳಿಯ ಜನಸಂಖ್ಯೆಗೆ ಅನುಸಾರವಾಗಿ ಪಂಚಾಯತಿ ಸದಸ್ಯರ ಸಂಖ್ಯೆ ೧೦ ರಿಂದ ೧೫ ರ ವರೆಗಿರುವುದು. ಆದರೆ ಇಂಥ ಕ್ರಿಯಾತ್ಮಕ ಉಪಸಮಿತಿಗಳಲ್ಲಿ ೫೦ ರಿಂದ ೧೦೦ ಮಂದಿಯ ವರೆಗೂ ಸದಸ್ಯರಿರಬಹುದು.

ಹೀಗೆ ಗ್ರಾಮಪಂಚಾಯತಿ ಒಂದು ಮಂತ್ರಿಮಂಡಲದಂತೆ ಕೆಲಸ ಮಾಡುವುದು. ಹಳ್ಳಿಯ ವಯಸ್ಕರೆಲ್ಲ ಸೇರಿ ಶಾಸನಸಭೆಗಳೆಂದು

ತಿಳಿಯಬೇಕು. ಕ್ರಿಯಾತ್ಮಕ ಉಪಸಮಿತಿಗಳು ಸ್ಥಾಯಿ ಸಮಿತಿಗಳಂತೆ ಅಥವಾ ಪಾರ್ಲಿಮೆಂಟಿನ ಆಲೋಚನಾ ಸಮಿತಿ ಅಥವಾ ರಾಜ್ಯಶಾಸನ ಸಭೆಗಳೆಂದು ಭಾವಿಸಬೇಕು.

ಕ್ರಿಯಾತ್ಮಕ ಉಪಸಮಿತಿಗಳೂ ಸಂಸ್ಥೆಗಳೂ ಪಂಚಾಯತಿ ಸಮಿತಿ ಮತ್ತು ಜಿಲ್ಲಾ ಪರಿಷತ್ತಿನೊಡನೆ ಇಂಥ ಸಂಬಂಧವಿಟ್ಟುಕೊಳ್ಳುವುವು. ರಾಜ್ಯ ಮತ್ತು ಕೇಂದ್ರ ಹಂತದಲ್ಲಿ ಮೇಲಿನ ಸಂಸ್ಥೆಗಳ ಪ್ರತಿನಿಧಿಗಳು ಪ್ರಮುಖ ಪಾತ್ರ ವಹಿಸುವ ದಿನ ಬರಬಹುದು.

**ಪಂಚಾಯತಿಯ ಚಟುವಟಿಕೆಗಳು**

ಹಳ್ಳಿಗೆ ಬೇಕಾದ ಅನುಕೂಲತೆಗಳಿಗ ಅನುಸಾರವಾಗಿ ಯೋಜನೆ ತಯಾರಿಸುವುದು, ಅಂಗೀಕೃತವಾದಂತೆ ಯೋಜನೆಯನ್ನು ಕಾರ್ಯಗತ-ಮಾಡುವುದು, ದೊರೆಯುವ ಎಲ್ಲ ಸಾಧನಸಂಪತ್ತುಗಳನ್ನು ಒಂದುಗೂಡಿಸುವುದು, ಮಾಡಿದ ಕೆಲಸದ ಲೆಕ್ಕಮಾಡುವುದು, ಅದನ್ನು ಸುಧಾರಿಸುವ ದೃಷ್ಟಿಯಿಂದ ಪರಿಶೀಲಿಸಿ ನಡೆಸುವುದು ಇವೆಲ್ಲ ಪಂಚಾಯತಿಯ ಕೆಲಸ. ಬರಬರುತ್ತಾ ಇದು ತನ್ನ ಚಟುವಟಿಕೆಗಳನ್ನು ಆಡಳಿತೆ ಹಾಗೂ ನ್ಯಾಯಾಂಗದವರೆಗೂ ವಿಸ್ತರಿಸುವುದು.

ನಮ್ಮ ಬೇಸಾಯಸಂಬಂಧವಾದ ಅರ್ಥವ್ಯವಸ್ಥೆಯಲ್ಲಿ ಬೇಸಾಯವೇ ಅಸ್ತಿವಾರ. ನಮ್ಮ ರೈತರ ಭೂಮಿ ತುಂಡುತುಂಡಾಗಿದ್ದು ಇವುಗಳಿಂದ ಜೀವನ ನಡೆಸುವುದೇ ಕಷ್ಟ. ಭೂಮಿಯಿಂದ ಉತ್ತಮ ಬೆಳೆ ಪಡೆಯುವಂತೆ ಪಂಚಾಯತಿ ಸಹಾಯ ಮಾಡಬಲ್ಲುದು. ಇದು ಹಿಡುವಳಿಗಳನ್ನು ಒಂದುಗೂಡಿಸಿ, ಬಂಜರು ಭೂಮಿಯನ್ನು ಸಾಗುವಳಿಗೆ ಸಿದ್ಧಗೊಳಿಸಬಲ್ಲುದು. ಚಿಕ್ಕ ನೀರಾವರಿ ಅಣೆಕಟ್ಟುಗಳನ್ನು ಇದು ಕಟ್ಟಬಲ್ಲುದು. ತಮ್ಮ ಹೊಲಗದ್ದೆಗಳಿಗೆ ಬೇಕಾದ ಸುಧಾರಿತ ಬೀಜವನ್ನು ಒದಗಿಸಿಕೊಳ್ಳುವುದಕ್ಕೂ ಗೊಬ್ಬರಕ್ಕಾಗಿ ಸ್ಥಳೀಕ ವಸ್ತುಗಳನ್ನೆಲ್ಲ ಸಂಗ್ರಹಿಸುವುದಕ್ಕೂ ಪಂಚಾಯತಿ ಪ್ರಯತ್ನಿಸಬೇಕು. ಪ್ರತಿಯೊಂದು ಕುಟುಂಬವೂ ಒಂದು ಮಿಶ್ರ ಗೊಬ್ಬರದ ಹೊಂಡ ತಯಾರಿಸಿಕೊಳ್ಳುವಂತೆ ನೋಡಿಕೊಳ್ಳಬೇಕು. ಸುಧಾರಿತ ಸಲಕರಣೆಗಳನ್ನು ಜಾರಿಗೆ ತರ

ಬಹುದು, ಕ್ರಿಮಿ ಕೀಟಗಳಿಂದ ಬೆಳೆಯನ್ನು ಕಾಪಾಡಲು ಪ್ರಯತ್ನಿಸಬಹುದು. ಹಳ್ಳಿಗಳಲ್ಲಿ ಕಾಡು, ಹುಲ್ಲುಗಾವಲು, ತೋಟ ಇವನ್ನೂ ಸಹ ಪಂಚಾಯತಿಯೇ ಸಾರ್ವಜನಿಕ ಹಿತಕ್ಕಾಗಿ ಬೆಳೆಸಿ ನೋಡಿಕೊಳ್ಳಬಲ್ಲುದು. ಇಷ್ಟಲ್ಲದೆ ಜಾನುವಾರುಗಳ ಪೋಷಣೆ ಬಗ್ಗೆಯೂ ಪಂಚಾಯತಿ ಪ್ರಯತ್ನಿಸಬಲ್ಲುದು. ಹೀಗೆ ನಾನಾ ರೀತಿಯಿಂದ ಉತ್ಪತ್ತಿಯನ್ನು ಎಲ್ಲ ವಿಧದಲ್ಲಿ ಹೆಚ್ಚಿಸಲು ಪಂಚಾಯತಿ ತುಂಬ ಸಹಾಯಕವಾದೀತು.



ಪಂಚಾಯತಿ ತನ್ನ ಆರ್ಥಿಕ ಕೈಯಂತಿರುವ ಸಹಕಾರಿ ಸಂಘವನ್ನು ಅಭಿವೃದ್ಧಿಗೊಳಿಸಬಲ್ಲುದು. ಇದು ಹಳ್ಳಿಯವರಿಗೆ ಬೇಕಾದ್ದನ್ನು ಒದಗಿಸುವುದು ಮಾತ್ರವಲ್ಲ, ಬೇಸಾಯ ಹಾಗೂ ಗ್ರಾಮ ಕೈಗಾರಿಕೆಗಳನ್ನು ಸಹಕಾರಿ ತತ್ವದ ಮೇಲೆ ಏರ್ಪಡಿಸಬಲ್ಲುದು. ಸ್ಥಳೀಕ ಉತ್ಪನ್ನಗಳನ್ನು ಜನಪ್ರಿಯಗೊಳಿಸಲು ಪಂಚಾಯತಿ ತುಂಬ ಸಹಾಯಕ. ಗಲ್ಲಿ ಮತ್ತು ರಸ್ತೆ ತಯಾರಿ, ದುರಸ್ತಿ, ರಕ್ಷಣೆ ಬಗ್ಗೆ ಹಾಗು ಚರಂಡಿ, ಕಟ್ಟೆ, ಅಡಿಗಾಲುವೆ,

ಸೇತುವೆ ಇವುಗಳ ಬಗ್ಗೆ, ಏರ್ಪಾಡು ಸಾರ್ವಜನಿಕ ಕಟ್ಟಡಗಳನ್ನು ಕಟ್ಟಿಸುವುದು, ಮಾರ್ಕೇಟುಗಳನ್ನು ಏರ್ಪಡಿಸುವುದು, ಹೊಂಡ, ಕೆರೆ ಇತ್ಯಾದಿಗಳ ದುರಸ್ತಿ, ಸಂರಕ್ಷಣೆ ಇವನ್ನೆಲ್ಲ ಪಂಚಾಯತಿ ಮಾಡಬಲ್ಲುದು. ಹಳ್ಳಿಯ ಶುಚಿತ್ವ, ರೋಗಗಳು ಹಡೆಯದಂತೆ ನೋಡಿಕೊಳ್ಳುವುದೂ ಪಂಚಾಯತಿಗೆ ಸಾಧ್ಯವಿದೆ.

ಶಾಲೆಗಳಲ್ಲಿ ಮಕ್ಕಳ ಹಾಜರಿ ಹೆಚ್ಚುವಂತೆ ಮಾಡುವುದು, ವಿದ್ಯಾ ಪ್ರಚಾರ, ರೋಗ ಗುಣವಾದಮೇಲಿನ ವೈದ್ಯಕೀಯ ಸಲಹೆ, ಆಟ ವಿನೋದ ಗಳ ಬಗ್ಗೆ ಕೇಂದ್ರಗಳನ್ನು ಏರ್ಪಡಿಸುವುದು; ಪುಸ್ತಕಭಂಡಾರ, ಹಳ್ಳಿ ರಂಗಮಂಟಪ, ಹಳ್ಳಿಗರ ಬಗ್ಗೆ ಸಾಮೂಹಿಕ ಕೇಂದ್ರ, ಇವನ್ನೆಲ್ಲ ಪಂಚಾಯತಿ ಏರ್ಪಡಿಸಬಲ್ಲುದು.

ನಮ್ಮ ದೇಶದಲ್ಲಿ ಜನಸಂಪತ್ತಿಗೇನೂ ಕೊರತೆಯಿಲ್ಲ. ಇದನ್ನು ಸರಿಯಾಗಿ ಉಪಯೋಗಿಸುವುದು ಪಂಚಾಯತಿಯ ಕೆಲಸಗಳಲ್ಲಿ ಅತಿ ಮುಖ್ಯವಾದದ್ದು. ಜನರು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತಾಗ ಬೇಕಾದರೆ ಪಂಚಾಯತಿ ಜನತೆಯ ವಿಶ್ವಾಸ ಗಳಿಸಬೇಕು. ಉದಾಹರಣೆಗೆ ಪಂಚಾಯತಿ ಶಾಲೆ ಕಟ್ಟಿಸಬಲ್ಲುದು. ಆದರೆ ಶಾಲೆಗೆ ಮಕ್ಕಳನ್ನು ಕಳು ಹುವುದು ಜನರ ಕೈಯಲ್ಲಿದೆ.

## ಪಂಚಾಯತಿ ಚಟುವಟಿಕೆಗಳ ಹೊಂದಾಣಿಕೆ

ಹೊಸ ಮಾದರಿಯಲ್ಲಿ ಪಂಚಾಯತಿಗೆ ಅಥವಾ ಗ್ರಾಮಸಂಘಕ್ಕೆ ಬ್ಲಾಕ್ ಮತ್ತು ಜಿಲ್ಲಾ ಹಂತಗಳಲ್ಲಿರುವ ಇತರ ಪ್ರಾತಿನಿಧಿಕ ಸಂಸ್ಥೆಗಳೊಡನೆ ನಿಕಟ ಸಂಬಂಧವಿರಬೇಕು. ಈ ಮೇಲಿನ ಸಂಸ್ಥೆಗಳನ್ನು ಪಂಚಾಯತಿಗಳೊಳಗೆ ಅಪ್ರತ್ಯಕ್ಷ ಚುನಾವಣೆ ಮೂಲಕ ರಚಿಸಬೇಕು. ಇವು ರಾಷ್ಟ್ರನಿರ್ಮಾಣ ಹಾಗೂ ಇತರ ಕಾರ್ಯಗಳಲ್ಲಿ ಪಂಚಾಯತಿಗಳಿಗೆ ಸಹಾಯ ಮಾಡುವುವಲ್ಲದೆ ಇವುಗಳಿಗೆ ತಾಂತ್ರಿಕ ವಿಷಯಗಳಲ್ಲಿ ಸಲಹೆ ಕೊಡುವುವು. ಇವುಗಳ ಸದಸ್ಯರಿಗೆ ತರಿಬೇತಿ ಕೊಡುವುವು.

## ಆದಾಯವೆಲ್ಲಿಂದ ?

ಹಿಂದೆ ಹೇಳಿದ ಕೆಲಸಗಳನ್ನೆಲ್ಲ ಕೈಕೊಳ್ಳಬೇಕಾದರೆ ಪಂಚಾಯತಿ

ಗಳಿಗೆ ಹಣ ಬೇಕು. ರಾಜ್ಯಸರಕಾರ ಸಂಗ್ರಹಿಸಿದ ಹಣದಲ್ಲಿ ಇದಕ್ಕೂ ಒಂದು ಪಾಲು ದೊರೆಯುವುದೇನೋ ನಿಶ್ಚಯ. ಆದರೆ ಇದು ಸಾಕಾಗದು. ಆದಕಾರಣ ಪಂಚಾಯತಿ ಕಾಯಂ ಆದಾಯ ಬರುವ ಹಾದಿಯನ್ನು ಕಂಡುಹಿಡಿಯಬೇಕು.

ಉದಾಹರಣೆಗೆ ಮಾರಾಟದ ಬಗ್ಗೆ ಮೀನು ಸಾಕಬಹುದು. ತೋಟ ಬೆಳೆಸಬಹುದು. ಅಲ್ಲದೆ ರಾಜ್ಯಸರಕಾರಗಳು ಪಂಚಾಯತಿಗಳಿಗೆ ತಮ್ಮ ಕಾರ್ಯಕ್ರಮಗಳನ್ನು ಮುಂದುವರಿಸಲು ಬೇಕಾದ ಹಣದ ಬಗ್ಗೆ ನಾನಾ ತೆರಿಗೆಗಳನ್ನು ಹೊರಿಸುವ ಅಧಿಕಾರ ಕೊಡುವ ವಿಚಾರ ಪರ್ಯಾಲೋಚಿಸುತ್ತಿವೆ.

ಮನೆ ತೆರಿಗೆ, ವೃತ್ತಿ ತೆರಿಗೆ, ವಾಹನ, ನೀರು, ವಿನೋದಾವಳಿ, ಪ್ರಾಣಿಗಳು ಇತ್ಯಾದಿಗಳ ಮೇಲೆ ಹೊರಿಸುವ ತೆರಿಗೆ, ಇವೇ ಇಂಥ ತೆರಿಗೆಗಳು. ಅಲ್ಲದೆ ಭೂಮಿಯಿಂದ ದೊರೆಯುವ ಹುಟ್ಟುವಳಿ, ಮಾರ್ಕೆಟ್, ಸಾರ್ವಜನಿಕ ಸ್ಥಳ, ಮೀನಿನ ಹೊಂಡ, ಹುಲ್ಲುಗಾವಲು ಇತ್ಯಾದಿಗಳ ಮೇಲೆಯೂ ತೆರಿಗೆ ಹೊರಿಸಲಾಗುವುದು.

### ತರಬೇತಿ

ಪಂಚಾಯತಿ ಯಶಸ್ವಿಯಾಗಿ ಕೆಲಸ ಮಾಡಬೇಕಾದರೆ ತರಬೇತಿ ಹೊಂದಿದ ಕೆಲಸಗಾರರು ಬೇಕು. ಕಾರ್ಯದರ್ಶಿಯಂಥ ಅಧಿಕಾರಿಗಳ ತರಬೇತಿಗೆ ಒಂದು ಬಗೆಯ ಸಂಸ್ಥೆಯನ್ನೇ ಸ್ಥಾಪಿಸಬಹುದು. ಆದರೆ ಕ್ರಿಯಾತ್ಮಕ ಸಮಿತಿ, ಉಪಸಮಿತಿ ಇತ್ಯಾದಿಗಳಲ್ಲಿ ಕೆಲಸಮಾಡುವ ಸಾವಿರಾರು ಮಂದಿಗೆ ತರಬೇತಿ ಕೊಡುವುದು ಸುಲಭವಲ್ಲ. ಆದಕಾರಣ ಜನರು ತಾವಾಗಿ ತರಬೇತಿ ಪಡೆದುಕೊಳ್ಳುವ ವಿಷಯವನ್ನು ಸಮಾಜವಿಕಾಸ ಕಾರ್ಯಕ್ರಮದಲ್ಲಿ ಪ್ರಯೋಗ ಪರೀಕ್ಷೆ ನಡೆಸಲಾಗುತ್ತಿದೆ.

ಗ್ರಾಮಸಹಾಯಕರ ತರಬೇತಿ ವಿಚಾರ ಈಗಾಗಲೇ ಹೇಳಿದ್ದೇವೆ. ಈ ತರಬೇತಿ ಯೋಜನೆ ಪ್ರಕಾರ ಬೇಸಾಯದ ವಿಷಯದಲ್ಲಿ ಮಾತ್ರ ಈಗ ತರಬೇತಿ ಪ್ರಾರಂಭವಾಗಿದೆ. ಬೇರೆ ಬೇರೆ ಹಳ್ಳಿಗಳಿಂದ ಪ್ರಗತಿಶೀಲ ರೈತರು ಈ ತರಬೇತಿ ಶಿಬಿರಗಳಲ್ಲಿ ಭಾಗವಹಿಸುತ್ತಿದ್ದಾರೆ. ಈಗಾಗಲೇ

ಸುಮಾರು ಹತ್ತುಲಕ್ಷ ಜನರಿಗೆ ತರಬೇತಿ ಕೊಡಲಾಗಿದೆ. ಆರೋಗ್ಯ, ಮಹಿಳಾ ಕಾರ್ಯಕ್ರಮ, ಕೈಗಾರಿಕೆ ಇತ್ಯಾದಿ ನಾನಾಕ್ಷೇತ್ರಗಳಲ್ಲಿ ತರಬೇತಿ ಕೊಡುವ ಬಗ್ಗೆ ಈ ತರಬೇತಿಯೋಜನೆಯನ್ನು ನಿಧಾನವಾಗಿ ವಿಸ್ತರಿಸ ಲಾಗುತ್ತಿದೆ. ಚೆನ್ನಾಗಿ ಕೆಲಸಮಾಡುತ್ತಿರುವ ತರಬೇತಿ ಹೊಂದಿದ ಹಾಗೂ ತಮ್ಮ ಅನುಭವವನ್ನು ಇತರರಿಗೆ ಒದಗಿಸುತ್ತಿರುವ ಗ್ರಾಮ ಸಹಾಯಕರನ್ನು ಬ್ಲಾಕ್ ಹಂತದ ಶಿಬಿರಗಳಲ್ಲಿ ಹೆಚ್ಚಿನ ತರಬೇತಿಗೆ ಆರಿಸಲಾಗುವುದು. ಇವರನ್ನು ಅಭ್ಯಾಸ ನಿಮಿತ್ತ ಸಂಚಾರಕ್ಕೂ ಕಳುಹಿಸ ಲಾಗುವುದು. ಹೀಗೆಯೇ ಜಿಲ್ಲೆ ಹಾಗೂ ರಾಷ್ಟ್ರದ ಹಂತದ ವರೆಗೆ ಈ ಆಯ್ಕೆ ತರಬೇತಿಗಳು ಮುಂದರಿಯುವುವು. ಅಲ್ಲದೆ ಇವರ ಬಗ್ಗೆ ಅಲ್ಪಾವಧಿಯ ತರಬೇತಿ ಬಗ್ಗೆ ರಾಜ್ಯ ಅಥವಾ ರಾಷ್ಟ್ರ ಹಂತದಲ್ಲಿ ತರಬೇತಿ ಸಂಸ್ಥೆಗಳನ್ನು ಏರ್ಪಡಿಸಬಹುದು.

ಈ ತರಬೇತಿಯಿಂದ ಪ್ರಗತಿಯ ಹಂತದಲ್ಲಿ ಕೆಲಸಮಾಡುವ ಇಚ್ಛೆ ಯುಳ್ಳವರಿಗೆ ಎಡೆಬಿಡದೆ ಒಟ್ಟಿಗೆ ಸೇರುವ ಅವಕಾಶ ದೊರೆಯುವುದು. ಹೀಗೆ ಕುಟುಂಬ, ಹಳ್ಳಿ, ಬ್ಲಾಕ್, ಜಿಲ್ಲೆ, ರಾಜ್ಯ, ಕೊನೆಗೆ ರಾಷ್ಟ್ರವೆಂದು ಒಂದನ್ನು ಇನ್ನೊಂದು ಆವರಿಸುವಂತಾಗುವುದು. " ಅಸಂಖ್ಯಾತ ಹಳ್ಳಿ ಗಳಿಂದ ಕೂಡಿದ ರಚನೆಯಲ್ಲಿ ಸದಾ ವಿಸ್ತರಿಸುತ್ತಿರುವ, ಎಂದೂ ಮೇಲೇರದ ವರ್ತುಳಗಳಿರುತ್ತವೆ. ಜೀವನ ಬುಡದಿಂದ ಆಧರಿಸಿರುವ ಗೋಪುರದಂತಿರುವುದಿಲ್ಲ ; ಆದರೆ ಜೀವನ ಒಂದು ಸಾಗರದ ಸುಳಿ ಯಂತಿರುವುದು. ಇದರಲ್ಲಿ ವ್ಯಕ್ತಿಯೇ ಕೇಂದ್ರ. ಇವನು ಸದಾ ಹಳ್ಳಿಯ ಬಗ್ಗೆ ಜೀವ ಕೊಡಲು ಸಿದ್ಧನಾಗಿರುವನು. ಹಳ್ಳಿಹಳ್ಳಿಗಳ ವರ್ತುಳಗಳ ಬಗ್ಗೆ ಜೀವ ಕೊಡಲು ಸಿದ್ಧವಾಗಿರುವುದು. ಕೊನೆಗೆ ಎಲ್ಲ ವ್ಯಕ್ತಿಗಳಿಂದ ಕೂಡಿದ ಒಂದೇ ಜೀವನವಾಗುವುದು. ಈ ವ್ಯಕ್ತಿಗಳು ತಮ್ಮ ಗರ್ವದ ಕಾಲದಲ್ಲಿ ಎಂದೂ ಕಲಹಪ್ರಿಯರಾಗುವುದಿಲ್ಲ. ಆದರೆ ಯಾವಾಗಲೂ ದೀನರಾಗಿರುವರು. ತಾವು ಸೇರಿರುವ ಸಾಗರದ ಸುಳಿಗಳ ಪೈಕಿ ಹೆಚ್ಚಿನವು ಗಳಲ್ಲಿ ಪಾಲುಗೊಳ್ಳುವರು. ಆದಕಾರಣ "ಅತ್ಯಂತ ಹೊರಗಿನ ವರ್ತುಳ ಒಳಗಿನ ವರ್ತುಳವನ್ನು ಪುಡಿಮಾಡುವ ಶಕ್ತಿ ಹೊಂದದು, ಆದರೆ ಇದು ಎಲ್ಲಕ್ಕೂ ಬಲ ಕೊಟ್ಟು ಅವುಗಳಿಂದ ತಾನು ಬಲ ಪಡೆಯುವುದು " ಎಂದು ಇದನ್ನೇ ಗಾಂಧೀಜೀಯವರು ಹೇಳಿದ್ದಾರೆ.

# ಸಹಕಾರಿ ಸಂಘ

ದೊಡ್ಡ ಕುಟುಂಬ ಇನ್ನಷ್ಟು ದೊಡ್ಡದಾಗುವುದೇ ಸಹಕಾರದ ಮುಖ್ಯ ಕಲ್ಪನೆಯೆಂದು ಇತ್ತೀಚಿಗೆ ನಮ್ಮ ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಸಹಕಾರಿ ಸಂಸ್ಥೆಯನ್ನು ಹಿಂದು ಸಮಷ್ಟಿ ಕುಟುಂಬಕ್ಕೆ ಹೋಲಿಸಿದ್ದಾರೆ. ಇವರಲ್ಲಿ ಒಬ್ಬ ಎಲ್ಲರ ಬಗ್ಗೆ ಕೈಲಾದಷ್ಟು ದುಡಿಯುತ್ತಾನೆ. ಪರಸ್ಪರ ಸಹಕಾರದಿಂದ ತನ್ನ ಸ್ವಂತ ಹಿತಗಳನ್ನು ಹೆಚ್ಚಿಸಿಕೊಳ್ಳುವುದೇ ಸಹಕಾರದ ಉದ್ದೇಶ. ವ್ಯಕ್ತಿ ಸಮಾಜಕ್ಕಾಗಿ, ಸಮಾಜ ವ್ಯಕ್ತಿಗಾಗಿ ಎಂಬುದೇ ಇದರ ಆದರ್ಶವಾಕ್ಯ.

ಒಗ್ಗಟ್ಟಿನಲ್ಲಿ ಬಲವಿದೆಯೆಂಬುದೊಂದು ಹಳೆಯ ಗಾದೆ. ಆದರೆ ಕೆಲವರು ತಮ್ಮ ಆರ್ಥಿಕ ಸಾಮಾಜಿಕ ಸ್ಥಾನಮಾನಗಳ ಬಲದಿಂದ ನಿರ್ಬಲರ ಮೇಲೆ ಅಧಿಕಾರ ಚಲಾಯಿಸುವ ಇಂದಿನ ಕಾಲದಲ್ಲಿ ಒಗ್ಗಟ್ಟು ಅತಿ ಮುಖ್ಯವಾಗಿದೆ. ಸಹಕಾರ ಬಲಹೀನರನ್ನು ಪರಸ್ಪರ ಸಹಾಯದಿಂದ ಒಂದುಗೂಡಿಸಿ ಬಲಿಷ್ಠರನ್ನಾಗಿಸುತ್ತದೆ. ಇದ್ದವರು ಇಲ್ಲದವರಿಗೆ ಸಹಕಾರ ನೀಡುತ್ತಾರೆ. ಇದರಿಂದ ದೊಡ್ಡವರಿಗೂ ಲಾಭವಿದೆ. ಆದಾಗ್ಯೂ ಶ್ರೀಮಂತ ವರ್ಗಕ್ಕೆ ಬಡವರ ಯೋಗಕ್ಷೇಮ ನೋಡಿಕೊಳ್ಳುವ ಹೊಣೆಗಾರಿಕೆ ಬರುವುದು. ಇಂಥ ಸಹಕಾರಿ ಚಳವಳಿ ಗ್ರಾಮಜೀವನದ ಎಲ್ಲ ವಿಷಯಗಳಿಗೂ ಅನ್ವಯಿಸುತ್ತದೆ. ಇದು ಸುಖೀರಾಜ್ಯಕ್ಕೆ ಅಸ್ತಿವಾರವಿಡುವುದರಲ್ಲಿ ಸಂದೇಹವಿಲ್ಲ.

**ಸಹಕಾರವೇಕೆ ?**

ಯೋಜನೆ ತಯಾರಿಸುವುದಕ್ಕೆ, ಕೆಲಸಮಾಡುವುದಕ್ಕೆ ಪಂಚಾಯತಿ ಇದ್ದಂತೆ ಹಳ್ಳಿಯ ಆರ್ಥಿಕಾಭಿವೃದ್ಧಿಗೆ ಸಹಕಾರಿ ಸಂಘ ಬೇಕಾಗಿದೆ. ಇದನ್ನು ಹಣಕಾಸು, ತಾಂತ್ರಿಕ ಹಾಗೂ ವ್ಯವಸ್ಥೆಯ ಬಗ್ಗೆ ಸಲಹೆ ಕೊಡುವಂತೆ ಏರ್ಪಡಿಸಬೇಕು. ದಕ್ಷತೆಯಿಂದ ಕೆಲಸ ಮಾಡುವುದಕ್ಕೆ ಸಹಕಾರಿ ಸಂಘಕ್ಕೆ ನೇಗಾರರು, ಕಸಬುದಾರರು, ಸಾರಿಗೆ ಮತ್ತು ಕಟ್ಟಡ ಕೆಲಸ

ಗಾರರು, ಇಟ್ಟಿಗೆ ತಯಾರಿಸುವವರು, ಸಹಕಾರಿ ರೈತರು ಮೊದಲಾದವರ ಉಪಸಂಘಗಳನ್ನು ಏರ್ಪಡಿಸಿಕೊಳ್ಳಲು ಸಾಧ್ಯವಿದೆ.

ಹೀಗೆ ಚುನಾವಣೆಗೆ ನಿಲ್ಲದವರಿಗೂ ಸಹಕಾರಿ ಚಟುವಟಿಕೆಯಲ್ಲಿ ಪ್ರತಿನಿಧಿಯಾಗಿ ದುಡಿಯುವ ಅವಕಾಶ ದೊರೆಯುತ್ತದೆ.

## ನಮ್ಮ ಹಳ್ಳಿ ಸಮಸ್ಯೆಗಳು

ನಮ್ಮ ದೇಶದ ಜನಸಂಖ್ಯೆಯಲ್ಲಿ ಶೇಕಡಾ ಎಂಬತ್ತರಷ್ಟು ಮಂದಿ ಬೇಸಾಯದೊಡನೆ ನೇರ ಅಥವಾ ದೂರ ಸಂಬಂಧವುಳ್ಳವರು. ನಮ್ಮ ಅರ್ಥವ್ಯವಸ್ಥೆಯ ಬುನಾದಿಯೇ ಬೇಸಾಯದ ಮೇಲಿದೆ. ಆದರೆ ಇದು ಎಷ್ಟು ಬಲವಾಗಿರಬೇಕಿತ್ತೋ ಅಷ್ಟಿಲ್ಲವೆನ್ನಲು ವ್ಯಸನಪಡಬೇಕಾಗಿದೆ.

ನಮ್ಮ ಹಿರಿಯರು ನೂರಾರು ವರ್ಷಗಳ ಹಿಂದೆ ಉಳುತ್ತಿದ್ದ ನಮೂನೆಯ ನೇಗಿಲಿನಿಂದಲೇ ಈಗಲೂ ಉಳುತ್ತಿದ್ದೇವೆ. ನಮ್ಮ ಅಜ್ಜ ಮುತ್ತಜ್ಜನ ಕಾಲದ ರೀತಿಯಲ್ಲೇ ನಾವಿಂದು ಬೇಸಾಯ ಮಾಡುತ್ತಿದ್ದೇವೆ. ನಮಗೆ ನೀರಾವರಿ ದೊರೆಯುವ ಭೂಮಿ ಸಾಕಷ್ಟಿಲ್ಲ. ಮಳೆಯನ್ನೇ ನಂಬಿ ಬೇಸಾಯ ಸಾಗಿಸುತ್ತಿದ್ದೇವೆ. ಇದರಿಂದ ನಮ್ಮ ಹೊಲಗದ್ದೆಗಳ ಉತ್ಪತ್ತಿ ಜಗತ್ತಿನಲ್ಲಿ ಎಕರೆಯೊಂದಕ್ಕೆ ದೊರೆಯುವುದಕ್ಕಿಂತ ಅತಿ ಕಡಿಮೆಯಾಯಿತು. ಆದರೆ ನಮ್ಮಲ್ಲಿ ಜನಸಂಖ್ಯೆಯಾದರೋ ಜಗತ್ತಿನಲ್ಲೇ ಅತಿ ಹೆಚ್ಚು. ಬೇಸಾಯದಿಂದ ಜನರನ್ನು ಬೇರೆ ಕಡೆಗೊಯ್ಯಲು ನಮ್ಮಲ್ಲಿ ಹೆಚ್ಚು ಕೈಗಾರಿಕೆಗಳೂ ಇಲ್ಲ.

ಒಂದು ಸಾಮಾನ್ಯ ಹಳ್ಳಿಯ ಕುರಿತು ವಿಚಾರಿಸೋಣ. ರೈತನಿಗೆ ಭೂಮಿ ಹಿರಿಯರಿಂದ ಬರುತ್ತದೆ. ಇದು ಆತನ ಮರಣಾನಂತರ ಆತನ ಮಕ್ಕಳಿಗೆ ಪಾಲಾಗಿ ಹಂಚಿಹೋಗುತ್ತದೆ. ಮೊಮ್ಮಕ್ಕಳ ಕಾಲದಲ್ಲಿ ಇನ್ನೂ ಪಾಲಾಗಿ ಭೂಮಿ ಚಿಕ್ಕದಾಗುತ್ತದೆ. ಹೀಗೆ ಭೂಮಿ ಚೂರುಚೂರಾಗಿ ಅಲ್ಲಿ ಇಲ್ಲಿ ಚದರಿಕೊಂಡರೆ ಯಾವ ಆಧುನಿಕ ಪದ್ಧತಿಯನ್ನೂ ಜಾರಿಗೆ ತರಲಾರೆವು. ಅಥವಾ ಹೊಸ ಸಲಕರಣೆಗಳ ಮೇಲೆ ಹಣ ಹಾಕಲಾರೆವು. ಹೀಗೆ ಚದರಿಕೊಂಡಿರುವ ಚಿಕ್ಕ ಚಿಕ್ಕ ತುಂಡು ಭೂಮಿಗಳ ಬಗ್ಗೆ ಬಾವಿಗಳನ್ನು ತೋಡಲಾರೆವು. ಬೇರೆ ದೇಶಗಳಲ್ಲಿ ರೈತರು ಅಣುಶಕ್ತಿಯನ್ನು ಭೂಮಿಗೆ ಉಪಯೋಗಿಸಿ ಹೆಚ್ಚಿನ ಫಸಲು ಪಡೆಯಲು ಪ್ರಯತ್ನಿಸುತ್ತಿರು

ವಾಗ ನಮ್ಮಲ್ಲಿ ಟ್ರ್ಯಾಕ್ಟರ್ ಸಹ ಉಪಯೋಗಿಸುವ ಸಂಭವವಿಲ್ಲ. ನಮಗೆ ಎತ್ತು ಕೋಣಗಳೇ ಕೆಲಸಕ್ಕೆ ತುಂಬ ಬೇಕಾದುವು. ಇದರಿಂದ ಎಲ್ಲ ವಿಧ ದಲ್ಲಿಯೂ ನಷ್ಟ ಮಾತ್ರವಲ್ಲ, ಬೇಸಾಯ ಇಷ್ಟಲ್ಲೇ ಇದ್ದು ಕುಂಠಿತ-ವಾಗಿದೆ.

ಬೇಸಾಯ ಕಾಲದಲ್ಲಿ ಹಳ್ಳಿಗರಿಗೆ ಹಣ ಬೇಕು. ಬೀಜ, ಗೊಬ್ಬರ, ನಲಕರಣೆ ಇತ್ಯಾದಿಗಳನ್ನು ಕೊಳ್ಳಬೇಕು. ಇಂಥ ಸಂದರ್ಭದಲ್ಲಿ ಎಲ್ಲಿಂ-ದಾದರೂ ಎಷ್ಟೇ ಬಡ್ಡಿಯಾದರೂ ಹಣ ಒದಗಿಸಿಕೊಳ್ಳಲು ರೈತ ಪ್ರಯ ತ್ನಿಸುತ್ತಾನೆ. ಸಿಕ್ಕಿದಲ್ಲಿಂದ ಸಾಲ ತರುತ್ತಾನೆ. ಬಡ್ಡಿಯ ದರವನ್ನು ಆಲೋಚಿಸುವುದೇ ಇಲ್ಲ. ಅನೇಕ ಸಲ ರೈತ ಸಾಲಕ್ಕಾಗಿ ತನ್ನ ಬೆಳೆ ಯನ್ನೇ ಅಡವು ಹಾಕುವುದುಂಟು. ತನ್ನ ಹೆಂಡತಿ ಮಕ್ಕಳ ಒಡವೆ ಗಳನ್ನು ಒತ್ತೆಯಿಡುವುದುಂಟು.

## ಸಹಕಾರವೊಂದೇ ಇದಕ್ಕೆ ಪರಿಹಾರ

ಆಗಾಗ ಒದಗುತ್ತಿರುವ ಹಾಗೂ ಎಡೆಬಿಡದೆ ಬರುತ್ತಿರುವ ಈ ಸಮಸ್ಯೆಗಳೆಲ್ಲ ಸಹಕಾರಿ ಸಂಘದಿಂದ ಮಾತ್ರ ಬಗೆಹರಿಯಬಲ್ಲುವು. ರೈತರು ತಮ್ಮ ಹಣ, ವಸ್ತು, ಇತ್ಯಾದಿಗಳನ್ನು ಸಹಕಾರಿ ಸಂಘಗಳ ಮೂಲಕ ಒಂದುಗೂಡಿಸಿ ಸಹಕಾರದಿಂದ ಬೇಸಾಯಮಾಡಿದರೆ ಇಂಥ ಸಮಸ್ಯೆಗಳನ್ನು ಸುಲಭವಾಗಿ ಬಗೆಹರಿಸಿಕೊಳ್ಳಬಹುದು. ರೈತರು ತಮ್ಮಲ್ಲಿ ಹೆಚ್ಚುಳಿದ ಹಣವನ್ನು ಒಟ್ಟುಗೂಡಿಸಿ ಸಾಲಕೊಡುವ ಸಹಕಾರಿ ಸಂಘಗಳನ್ನು ಏರ್ಪಡಿಸಿಕೊಂಡರೆ ಸರಕಾರದಿಂದಲೂ ಸಾಕಷ್ಟು ಹಣ ದೊರೆಯುವುದು. ರೈತರು ಈ ಸಂಘಗಳಿಂದ ಸುಲಭ ಕಂತಿನಲ್ಲಿ ಸಾಲ ಪಡೆಯಬಹುದು. ಸಹಕಾರಿ ಬೇಸಾಯವನ್ನು ಕೈಕೊಳ್ಳುವ ವರೆಗೆ ಬೇಸಾಯದಿಂದ ನಾವು ಸಂಪೂರ್ಣ ಪ್ರತಿಫಲ ಪಡೆಯಲಾರೆವೆಂದು ಗಾಂಧೀಜಿಯವರು ಹೇಳಿದ್ದಾರೆ. ಸಹಕಾರಿ ಬೇಸಾಯದಿಂದ ಹಣ ಉಳಿ ಯುತ್ತದೆ. ಸಮಯ ಹಾಳಾಗುವುದಿಲ್ಲ. ಅಗತ್ಯವಿಲ್ಲದ ತೊಂದರೆಗಳೂ ಇರುವುದಿಲ್ಲ. ಕಡಮೆ ಹಣ ಹಾಕಿ ಹೆಚ್ಚು ಸಂಪಾದಿಸಿಕೊಳ್ಳಬಹುದು. ಹೀಗೆ ಉಳಿದ ಹಣವನ್ನು ನಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಇಲ್ಲವೇ ಒಳ್ಳೆ

ಮನೆ ಕಟ್ಟುವುದಕ್ಕಾಗಿ ಉಪಯೋಗಿಸಬಹುದು. ಉಳಿಸಿಕೊಂಡ ಸಮಯವನ್ನು ಬೇರೆ ತರದ ಲಾಭದಾಯಕ ಕೆಲಸಗಳಿಗೆ ವಿನಿಯೋಗಿಸ ಬಹುದು. ಅಲ್ಲದೆ ಗಡಿವಿವಾದಗಳೂ ಕಡಿಮೆಯಾಗಬಹುದು.

ಒಮ್ಮೆ ಹೊಲ ಗದ್ದೆಗಳ ಫಸಲು ಹೆಚ್ಚುವ ಭರವಸೆ ಬಂದರೆ ದವಸ ಧಾನ್ಯಗಳ ಜೋಪಾನ, ಪ್ರಕ್ರಿಯೆ (ಪ್ರೋಸೆಸಿಂಗ್) ಇತ್ಯಾದಿಗಳ ಬಗ್ಗೆಯೂ ಸಹಕಾರಿ ಸಂಘಗಳನ್ನು ಏರ್ಪಡಿಸಿಕೊಳ್ಳಬಹುದು. ಜೋಪಾನ ವಿರಿಸುವುದರಿಂದ ಸರಿಯಾದ ಕಾಲದಲ್ಲಿ ಧಾನ್ಯಗಳನ್ನು ಮಾರಾಟ ಮಾಡಲು ಸಹಾಯವಾಗುವುದು. ಪ್ರಕ್ರಿಯೆಯಿಂದ ಧಾನ್ಯಗಳನ್ನು ಮಾರಾಟ ಮಾಡುವ ದಲಾಲಿಗಳು ಹಳ್ಳಿಗರಿಂದ ಹೆಚ್ಚು ಲಾಭ ಪಡೆಯ ದಂತಾಗುವುದು.



ಸಹಕಾರಿ ಸಂಘಗಳ ಮೂಲಕ ಬೇಸಾಯವನ್ನು ಪರಮಾಧಿಕ ಸುಧಾರಿಸುವುದು ಹೇಗೆಂದು ನಾವೀಗ ನೋಡಿದ್ದೇವೆ. ಇಷ್ಟೇ ಅಲ್ಲ. ನಮ್ಮಲ್ಲಿ ಕೆಲಸಗಾರರ ಸಂಖ್ಯೆಯೂ ಬೇಕಾದ್ದಕ್ಕಿಂತ ಹೆಚ್ಚಾಗಿರುವುದು. ಆದರೂ ನಮ್ಮ ದೇಶಕ್ಕೆ ಇದೊಂದು ದೊಡ್ಡ ಸಮಸ್ಯೆಯಲ್ಲ. ಕೆಲಸ ಗಾರರೇ ನಮ್ಮ ದೇಶದ ಅತಿ ದೊಡ್ಡ ಆಸ್ತಿ. ಇವರನ್ನು ಸಮಾಜ ವಿಕಾಸ

ಕಾರ್ಯಗಳಲ್ಲಿ ಉಪಯೋಗಿಸಿ ದೇಶದ ಏಳಿಗೆಗೆ ನೆರವಾಗಲು ಸಾಧ್ಯವಿದೆ. ಸಹಕಾರಿ ಸಂಘಗಳ ಮೂಲಕ ಬೇಸಾಯವನ್ನು ಸುಧಾರಿಸುವುದರಿಂದ ಪರಮಾಧಿಕ ಲಾಭಪಡೆಯುವುದು ಹೇಗೆಂದು ನಾವೀಗ ತಿಳಿದಿದ್ದೇವೆ.

ಉದಾಹರಣೆಗೆ ಎಲ್ಲೆ ಕಟ್ಟುವ ಕೆಲಸವನ್ನು ತಕ್ಕೊಳ್ಳೋಣ. ತುಂಬ ಜನರು ಕೆಲಸ ಮಾಡಿದರೆ ಈ ಕೆಲಸ ಬೇಗನೇ ಮುಗಿದೀತು. ತಪ್ಪಲುಗಳಲ್ಲಿ ಹಾಗೂ ತಗ್ಗಾದ ಪ್ರದೇಶಗಳಲ್ಲಿ ಗೋಡೆ ಅಥವಾ ದಂಡೆ ಕಟ್ಟಿ ನೀರು ನಿಲ್ಲಿಸಲು ಸಾಧ್ಯವಿದೆ. ಮುಂಬೈ ರಾಜ್ಯ ಈ ಕೆಲಸವನ್ನು ಅತಿ ವಿಸ್ತಾರವಾಗಿ ಕೆಲಸ ಮಾಡಿದೆ.

ನಮ್ಮ ಕುಟುಂಬದ ಉಪಯೋಗಕ್ಕೆ ನಮಗೆ ಅನೇಕ ವಸ್ತುಗಳು ಬೇಕು. ಉಪ್ಪು, ಸಕ್ಕರೆ, ಸೀಮೆಯಣ್ಣೆ, ಬಟ್ಟೆಬರೆ ಇತ್ಯಾದಿಗಳೆಲ್ಲ ಅಗತ್ಯ ಬೇಕಾದುವು. ಇಷ್ಟಲ್ಲದೆ ಇನ್ನೂ ಅನೇಕ ಚಿಕ್ಕ ಚಿಕ್ಕ ಸಾಮಾನುಗಳು ಬೇಕಾಗುತ್ತವೆ. ಇವನ್ನೆಲ್ಲ ಗ್ರಾಮ ಸಹಕಾರ ಸಂಘ ಸಂಗ್ರಹಿಸಿ ಒದಗಿಸುವುದರಲ್ಲಿ ಸಹಾಯಮಾಡಬಲ್ಲುದು.

ಹೀಗೆಯೇ ಹಳ್ಳಿಯ ಕಸಬುದಾರನಿಗೂ ಸಹಕಾರಿ ಸಂಘಗಳಿಂದ ಲಾಭವಿದೆ. ಅವನಿಗೆ ಉತ್ತಮ ಸಲಕರಣೆ ಬೇಕು. ಕಚ್ಚಾ ವಸ್ತುಗಳ ಖರೀದಿಗೆ ಹಣ ಬೇಕು. ಆದಕಾರಣ ಕುಸುಬಿಗೆ ಬೇಕಾದ ಕಚ್ಚಾ ವಸ್ತುಗಳನ್ನು ಒದಗಿಸುವುದಕ್ಕೂ ಲಾಭ ಸಿಗುವ ದರದಲ್ಲಿ ತಯಾರಾದ ವಸ್ತುಗಳನ್ನು ಮಾರಾಟ ಮಾಡುವುದಕ್ಕೂ ಆತನಿಗೆ ಒಂದು ಪ್ರತಿನಿಧಿ ಸಂಸ್ಥೆ ಬೇಕಾಗಿದೆ.

## ಸಹಕಾರಿ ಸಂಘಗಳ ವೈವಿಧ್ಯ

ಸಹಕಾರಿ ಸಂಘಗಳಲ್ಲಿ ನಾನಾ ತರಹದವುಗಳಿವೆ. ಕೆಲವು ಸಾಲ ಕೊಡುವುವು. ಕೆಲವು ಕಾಲದ ವ್ಯವಹಾರ ನಡೆಸದವು. ಸ್ಟೇಟ್ ಮತ್ತು ಸೆಂಟ್ರಲ್ ಬ್ಯಾಂಕುಗಳು, ಬ್ಯಾಂಕಿಂಗ್ ಯೂನಿಯನುಗಳು, ಸೆಂಟ್ರಲ್ ಲೇಂಡ್ ಮೋರ್ಟಗೇಜ್ ಬ್ಯಾಂಕ್ (ಕೇಂದ್ರ ಭೂಮಿ ಅಡಮಾನ ಬ್ಯಾಂಕ್) ಎಗ್ರಿಕಲ್ಚರಲ್ ಬ್ಯಾಂಕುಗಳು, ನಾನ್ ಎಗ್ರಿಕಲ್ಚರಲ್ ಬ್ಯಾಂಕುಗಳು, ಗ್ರೇಯಿನ್ ಬ್ಯಾಂಕ್ (ಧಾನ್ಯದ ಬ್ಯಾಂಕ್) ಲೇಂಡ್

ಮೋರ್ಟ್‌ಗೇಜ್ ಬ್ಯಾಂಕ್ ( ಭೂಮಿ ಅಡಮಾನದ ಬ್ಯಾಂಕ್ ). ಸಾಲ ಕೊಡವ ಸಂಘಗಳಲ್ಲಿ ಮಾರಾಟ ಸಂಘ, ಕಬ್ಬು ಪೂರೈಕೆ ಸಂಘ, ಬೇಸಾಯ ಸಂಘ, ನೀರಾವರಿ ಸಂಘ, ಇತರ ಕೃಷಿ ಸಂಘ, ಸಕ್ಕರೆ ಕಾರಖಾನೆ, ಹತ್ತಿ ಸರಿಪಡಿಸುವ ಮತ್ತು ಒತ್ತುವ ಸಂಘ, ನೇಗಾರ ಸಂಘ, ನೂಲುವ ಗಿರಣಿ, ಸ್ಟೋರು, ಮನೆ ಕಟ್ಟುವ ಸಂಘ, ಮೀನುಗಾರಿಕೆ ಸಂಘ, ಜೀವವಿಮಾ ಸಂಘ ಇತ್ಯಾದಿಗಳು ಸೇರಿವೆ.



## ರೈತರ ಪರವಾಗಿ ಕೆಲಸ ಮಾಡುವ ಸಂಸ್ಥೆ

ರೈತರ ಪರವಾಗಿ ಸರಕಾರವಿದ್ದರೂ ಸ್ಥಳೀಕ ವ್ಯಕ್ತಿಯೇ ಅತ್ಯುತ್ತಮ ವ್ಯವಸ್ಥಾಪಕನಾಗಿರುವನು. ಹೊರಗಿನ ಸಂಸ್ಥೆಯನ್ನು ಜನರು ಆಶ್ರಯಿಂ

ನುಪುದು ಒಳ್ಳೆಯದಲ್ಲ. ಇದರಿಂದ ಅವರ ಶಕ್ತಿ ಹಾಗೂ ಕ್ರಿಯಾರಂಭ ಶಕ್ತಿ ನಾಶವಾಗುವುದಲ್ಲದೆ ವ್ಯಕ್ತಿಯ ಸ್ವಾವಲಂಬತನವೂ ಅಡಗಿ ಹೋಗುವದು. ಸಹಕಾರಿ ಸಂಘ, ಗ್ರಾಮ ಪಂಚಾಯತಿ, ಶಾಲೆ ಈ ಶಕ್ತಿತ್ರಯವೇ ನಮ್ಮ ದೇಶದ ಬುನಾದಿ. ಜನರು ಒಗ್ಗಟ್ಟಾಗಿ ಹಳ್ಳಿಗಳ ಮಟ್ಟದಿಂದಲೇ ಕೆಲಸ ಮಾಡಲು ನಾವು ಸಹಾಯ ಮಾಡದಿದ್ದರೆ ಪ್ರಜಾಪ್ರಭುತ್ವದ ಕುರಿತಾದ ನಮ್ಮ ಮಾತೆಲ್ಲ ನಿಷ್ಫಲ.

## ಸಹಕಾರಿ ಸಂಘ ಮತ್ತು ಪಂ. ವಾ. ಯೋಜನೆಗಳು

ನಮ್ಮ ದೇಶದಲ್ಲಿ ಸಹಕಾರಿ ಚಳವಳ ಎಷ್ಟೋ ಕಾಲದಿಂದ ನಡೆಯುತ್ತಿತ್ತು. ಆದರೆ ಪಂಚವಾರ್ಷಿಕ ಯೋಜನೆಗಳಿಂದ ಇದಕ್ಕೆ ಇನ್ನಷ್ಟು ಕಳೆಯೇರಿದೆ. ಅನೇಕ ವಿಕಾಸ ಯೋಜನೆಗಳನ್ನು ಅದರಲ್ಲೂ ಬೇಸಾಯ ಮತ್ತು ಗ್ರಾಮಕೈಗಾರಿಕೆಗಳಿಗೆ ಸಂಬಂಧಿಸಿದ ಅನೇಕ ಯೋಜನೆಗಳನ್ನು ಸಹಕಾರಿ ಸಂಸ್ಥೆಗಳಿಗೆ ಒಪ್ಪಿಸಲಾಗಿದೆ. ಹಳ್ಳಿಯ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಸಹಕಾರಿ ಸಂಘವೇ ಅತ್ಯುತ್ತಮ ಸಾಧನ. "ಯೋಜನಾಬದ್ಧ ವಿಕಾಸ ಯೋಜನೆಯ ಅಂಗವಾಗಿ ಒಂದು ಸಹಕಾರಿ ವಿಭಾಗವನ್ನು ರಚಿಸುವುದು ರಾಷ್ಟ್ರೀಯ ನೀತಿಯ ಒಂದು ಮುಖ್ಯ ಗುರಿ" ಎಂದು ದ್ವಿತೀಯ ಯೋಜನೆಯಲ್ಲಿ ಹೇಳಲಾಗಿದೆ.

ಆರಂಭದಲ್ಲಿ ಹಳ್ಳಿಗೊಂದು ಚಿಕ್ಕ ಸಹಕಾರಿ ಸಂಘವಿದ್ದರೆ ಸದಸ್ಯರು ಒಟ್ಟಾಗಿ ಕಷ್ಟಪಟ್ಟು ದುಡಿಯಬಲ್ಲರು. ಒಬ್ಬರನ್ನೊಬ್ಬರು ನಂಬಲು ಕಲಿಯಬಲ್ಲರು. ಬರಬರುತ್ತಾ ಅವರ ಚಟುವಟಿಕೆಗಳು ಹಬ್ಬಬಹುದು. ಹಳ್ಳಿಗರಿಗೆ ಬೇಕಾದ್ದನ್ನೆಲ್ಲ ಒದಗಿಸುವುದು ಗುರಿಯಾಗಿದ್ದರೂ ಆರಂಭದಲ್ಲೇ ಅಂಥ ಜವಾಬ್ದಾರಿ ಹೊರಲು ಯಾವ ಸಂಘವೂ ತಯಾರಾಗಲಿಕ್ಕಿಲ್ಲ. ಇದು ಯೋಗ್ಯವೂ ಅಲ್ಲ.

ನಮ್ಮಂಥ ಬಡ ದೇಶದಲ್ಲಿ ಸಾಲ ಒಂದು ಅತಿ ಮುಖ್ಯ ವಿಷಯ. ಆದರೆ ಸಾಲವನ್ನು ಸದುಪಯೋಗ ಮಾಡುವ ಉದ್ದೇಶದಿಂದ ಸಂಘ ಇತರ ಚಟುವಟಿಕೆಗಳಿಗೇ ಸಂಬಂಧಿಸಿರುವುದು ಒಳ್ಳೆಯದು. ಆದಕಾರಣ ಪ್ರತಿ ಹಳ್ಳಿಗೂ ಒಂದು ಸೇವಾ ಸಹಕಾರಿ ಸಂಘ ಅಗತ್ಯವೆಂದಂತಾಯಿತು.

ವರ್ಷವಾದಂತೆ ಅನುಭವ ಪಡೆದಂತೆ ಈ ಸಂಘದ ಕಾರ್ಯಾವಕಾಶ ವಿಸ್ತಾರವಾಗುತ್ತಾ ಬರುವುದು. ಹಳ್ಳಿಯ ಪ್ರತಿ ಕುಟುಂಬವೂ ಸಹಕಾರಿ ಸಂಘಕ್ಕೆ ಸೇರುವುದು ಅಗತ್ಯ, ಪ್ರತಿ ಕುಟುಂಬವೂ ಸಾಲ ಪಡೆಯುವ ಅರ್ಹತೆ ಹೊಂದುವಂತೆ ಮಾಡುವುದು ಸಹಕಾರಿ ಸಂಘದ ಕೈಯಲ್ಲಿದೆ.

**ತರಬೇತಿ**

ಇವನ್ನೆಲ್ಲ ಕೈಕೊಳ್ಳುವುದು ಸುಲಭವೇ ಎಂದು ಕೇಳಬಹುದು. ಹೌದು, ಸುಲಭವೇ ಸರಿ. ಏಕೆಂದರೆ ನಮ್ಮಲ್ಲಿ ಈ ವರೆಗೆ ಉಪಯೋಗಿಸದ ಅಪಾರವಾದ ಜನಶಕ್ತಿ ಇದೆ. ಬೇಕಾದ ವಸ್ತುಗಳೆಲ್ಲ ಇವೆ. ಕೆಲಸ ಮಾಡುವ ಇಚ್ಛೆಯೂ ಇದೆ. ಆದಕಾರಣ ಈ ಚಳವಳವನ್ನು ಯಶಸ್ವಿಗೊಳಿಸಬೇಕಾದರೆ ಒಂದು ತರಬೇತಿ ಕಾರ್ಯಕ್ರಮವನ್ನು ಆರಂಭಿಸಬೇಕು. ನಾವು ಹೆಚ್ಚು ಕಲಿತಂತೆ ಸಮಾಜಕ್ಕೂ ಒಳ್ಳೇದು; ಹಳ್ಳಿಗೂ ಹಿತ. ಆದಕಾರಣ ಪಂಚಾಯತಿ ಸದಸ್ಯರಿಗಾಗಿ ನಡೆಸಿದಂತೆ ತರಬೇತಿ ಕೇಂದ್ರಗಳನ್ನು ಇವರ ಬಗ್ಗೆ ದೇಶದ ಬೇರೆ ಬೇರೆ ಕಡೆಗಳಲ್ಲಿ ಕ್ರಮವಾಗಿ ಏರ್ಪಡಿಸಲಾಗುತ್ತಿದೆ. ಬ್ಲಾಕ್ ಹಂತದಲ್ಲಿ ಸಹಕಾರಿ ವಿಸ್ತರಣ ಸಹಾಯಕನ ಮೂಲಕ ಇಲ್ಲವೇ ಸಹಕಾರಿ ಸಂಘಗಳ ಸಹಾಯಕ ರಿಜಿಸ್ಟ್ರಾರರ ಮೂಲಕ ಯಾವ ರೈತನಿಗೂ ಈ ತರಬೇತಿ ಕೇಂದ್ರಕ್ಕೆ ಸೇರಿಕೊಳ್ಳಬಹುದು. ಇಂಥ ಅವಕಾಶವನ್ನು ರೈತರು ಉಪಯೋಗಿಸಿಕೊಳ್ಳಬೇಡವೇ?

---

# ಶಾಲೆ

ಪಂಚಾಯತಿ ಮತ್ತು ಸಹಕಾರಿ ಸಂಘದೊಡನೆ ಶಾಲೆಯೂ ಹಳ್ಳಿಗಳ ಆರ್ಥಿಕ ಮತ್ತು ಸಾಮಾಜಿಕಸುಧಾರಣೆಗೆ ನೆರವಾಗುತ್ತಿದೆ. ಈ ಮೂರು ಸಂಸ್ಥೆಗಳೂ ಒಂದಕ್ಕೊಂದು ಸಹಕಾರ ನೀಡುವಂಥವು. ಒಂದರ ಬಲ ಎಲ್ಲದರ ಬಲವಾಗಿದೆ.

## ಹಿಂದಿನ ಸಂಪ್ರದಾಯ

ಪ್ರಾಚೀನ ಕಾಲದಲ್ಲಿ ಅಧ್ಯಾಪಕರನ್ನು 'ಗುರು' 'ಆಚಾರ್ಯ' ಎನ್ನು ತ್ತಿದ್ದರು. ಇವರು ರಾಜಮಹಾರಾಜರುಗಳಿಂದೆಲ್ಲ ಎಷ್ಟೋ ಹೆಚ್ಚು ಪಾಲು ಭಾರತದ ನಿರ್ಮಾಣದಲ್ಲಿ ನೆರವಾಗಿದ್ದರು. ಹೀಗೆಯೇ ನಮ್ಮ ದೇಶದಲ್ಲಿ ಶಂಕರ, ಮಧ್ವ, ರಾಮಾನುಜ, ಬಸವೇಶ್ವರ ಮೊದಲಾದ ಮತಾ ಚಾರ್ಯರೂ ಇದ್ದರು. ಇವರೆಲ್ಲ ಜನತೆಯ ಏಳಿಗೆಗಾಗಿ ಎಡೆಬಿಡದೆ ದುಡಿಯುತ್ತಿದ್ದರು. ಇವರೆಲ್ಲ ಹಳ್ಳಿಹಳ್ಳಿಗಳಿಗೆ ಹೋಗಿ ಜ್ಞಾನಪ್ರಸಾರ ಮಾಡುತ್ತಿದ್ದರು. ಆಶ್ರಮಗಳನ್ನು ಮಠಗಳನ್ನು ಏರ್ಪಡಿಸಿ ಶಿಷ್ಯರಿಗೆ ಪಾಠ ಹೇಳುತ್ತಿದ್ದರು. ಹಳ್ಳಿಗರು ಅಧ್ಯಾಪಕರನ್ನು ಅತ್ಯಂತ ಗೌರವ ದಿಂದ ನೋಡಿಕೊಳ್ಳುತ್ತಿದ್ದರು. ಅಧ್ಯಾಪಕರು ವಿದ್ಯಾರ್ಥಿಗಳೊಡನೆ ಮಾತ್ರ ಸಂಬಂಧವಿಟ್ಟುಕೊಳ್ಳುತ್ತಿದ್ದಿಲ್ಲ. ಇಡೀ ಹಳ್ಳಿಯೇ ಅಧ್ಯಾಪಕ ರಿಗೆ ಚಿರಪರಿಚಿತವಾಗಿತ್ತು.

## ವಿದೇಶೀಯರ ಆಳಿಕೆಯಲ್ಲಿ

ಅಧಿಕಾರ ಕೇಂದ್ರೀಕೃತವಾದಂತೆ ಶಾಲೆಯ ಮೇಲೆ ಸರಕಾರದ ಹತೋಟಿ ಹೆಚ್ಚು ಹೆಚ್ಚಾಯಿತು. ಹಳ್ಳಿಗರೊಡನಿದ್ದ ನಿಕಟ ಸಂಬಂಧ ವೆಲ್ಲ ಮಾಯವಾಯಿತು. ಶಾಲೆ ಒಂದು ಪ್ರತ್ಯೇಕ ಸಂಸ್ಥೆಯಾಗಿ ಉಳಿ ಯಿತು. ವಿದ್ಯಾಭ್ಯಾಸ ಕೇವಲ ಪುಸ್ತಕದ ಬದನೆಕಾಯಿಯಾಗಿ ಪರಿಣಮಿ ಸಿತು. ವಿದ್ಯಾರ್ಥಿಗಳಿಗೆ ವಿಷಯ ಸಂಗ್ರಹವಾಗುತ್ತಿದ್ದರೂ ಜ್ಞಾನಾರ್ಜನೆಗೆ

ವಿದೇಶೀಯರ ಕಾಲದ ವಿದ್ಯಾಭ್ಯಾಸ ಸಹಾಯಕವಾಗಿದ್ದಿಲ್ಲ. ಇಂಗ್ಲಿಷ್ ಭಾಷೆಯನ್ನು ಮಾಧ್ಯಮಿಕವಾಗಿ ಪ್ರಾರಂಭಿಸಿದ ಮೇಲೆ ವಿದ್ಯಾಭ್ಯಾಸಕ್ಕೂ ಹಳ್ಳಿಗರಿಗೂ ಹೆಚ್ಚಿನ ಸಂಬಂಧವೇ ಇಲ್ಲದಾಯಿತು. ವಿದೇಶೀ ಆಡಳಿತೆ ದಾರರ ಸೇವೆಗೆ ಮಾತ್ರ ಇವರಿಂದ ಅನುಕೂಲವಾಗುತ್ತಿತ್ತು.

ಇವರ ಪರಿಣಾಮವೇನು? ನಾವು ನಮ್ಮ ದೇಶದ ಚರಿತ್ರೆ ಭೂಗೋಲಶಾಸ್ತ್ರ ಇತ್ಯಾದಿಗಳನ್ನು ಮರೆತು ಇತರ ದೇಶಗಳ ಚರಿತ್ರೆ-, ಭೂಗೋಳಶಾಸ್ತ್ರಗಳನ್ನು ಕಲಿತೆವು. ಕಾಳಿದಾಸನಿಗಿಂತಲೂ ಶೇಕ್ಸ್‌ಪಿಯರ್ ನಮಗೆ ಜನಪ್ರಿಯನಾದ. ಇಂಗ್ಲಿಷ್ ಬಾರದಿದ್ದರೆ ಅನಾಗರಿಕ ನೆಂಬ ಭಾವನೆಗ ಅವಕಾಶವಾಯಿತು. ಇಂಗ್ಲಿಷ್ ಬೆರಸದೆ ಮಾತಾಡಿದರೆ ವಿದ್ಯಾವಂತನೇ ಅಲ್ಲ ಎನ್ನುವಷ್ಟು ಕೆಲವರ ಅಭಿಪ್ರಾಯವಾಗಿತ್ತು. ದೇಶ ಭಾಷೆಗಳೆಲ್ಲ ಅಧೋಗತಿಗಿಳಿದುವು.

## ಹೊಸ ಆಲೋಚನೆ

ಇಂಥ ಭಾಷೆಯ ಒತ್ತಾಯವನ್ನು ಎದುರಿಸಲು ಮುಂದಾದವರಲ್ಲಿ ಮೊತ್ತ ಮೊದಲಿನವರು ಗಾಂಧೀಜೀಯವರು. ನಮ್ಮ ಶಿಕ್ಷಣಕ್ಕೆ ನಿಜ ಸ್ವರೂಪವನ್ನು ಕೊಡಲು ಅವರು ಮುಂದಾದರು. ಇದಕ್ಕಾಗಿ ' ನಯಿ ತಾಲಿಮ್ ' ಅಂದರೆ ಕೆಲಸದ ಮೂಲಕ ಕಲಿಯುವ ಶಿಕ್ಷಣ ಪದ್ಧತಿಯನ್ನು ತೋರಿಸಿಕೊಟ್ಟರು. ವಿದ್ಯಾರ್ಥಿಯ ತಾತ್ವಿಕ ಏಳಿಗೆಗಿಂತಲೂ ಸರ್ವತೋಮುಖವಾದ ಪ್ರಾಯೋಗಿಕ ಏಳಿಗೆಗೆ ಅವರು ಹೆಚ್ಚಿನ ಪ್ರಾಧಾನ್ಯ ಕೊಟ್ಟಿದ್ದರು. ಅವರಿಗೆ ಕೆಲಸವೇ ಅತಿ ಮುಖ್ಯ. ಉದಾಹರಣೆಗೆ ತಾಯಿ ತನ್ನ ಮಗುವಿಗೆ ಹೇಗೆ ಕಲಿಸುತ್ತಾಳೆ? ಪುಸ್ತಕಗಳ ಮೂಲಕವಲ್ಲ. ಉದಾಹರಣೆ ಹಾಗೂ ಕೃತಿಗಳ ಮೂಲಕ ಕಲಿಸುತ್ತಾಳೆ.

ನಮ್ಮ ಮುಂದಿನ ಜನಾಂಗ ದೇಶದ ಪುನಾರಚನೆಯಲ್ಲಿ ತನ್ನ ಪಾತ್ರ ವಹಿಸಬೇಕೆಂದು ಗಾಂಧೀಜೀ ಭಾವಿಸಿದ್ದರು. ಆದಕಾರಣ ಹಳ್ಳಿಗಳ ಆವಶ್ಯಕತೆಗಳಿಗನುಸಾರವಾಗಿ ಕಸಬುಗಳಿಗೆ ತಕ್ಕ ಸ್ಥಾನ ಕೊಡಲಾಗಿತ್ತು. ಅಂಥ ಸಾಮೀಪ್ಯವನ್ನು ಉಂಟುಮಾಡಿ ಶಾಲೆ ಗ್ರಾಮಸಮಾಜದ ಒಂದು ಅಂಗವಾಗಬೇಕಾಗಿದೆ.

## ಮುಂದಿನ ಯೋಜನೆ

ನಮಗೆ ಕೇವಲ ಸಮಾಚಾರ ತಿಳಿಸುವುದು ವಿದ್ಯಾಭ್ಯಾಸವಲ್ಲ. ನಮ್ಮ ಜೀವನವನ್ನು ಎಲ್ಲ ವಾಸ್ತವಿಕ ವಿಷಯಗಳೊಡನೆ ಸಮರಸಗೊಳಿಸುವುದೇ ವಿದ್ಯಾಭ್ಯಾಸವೆಂದು ವಿಶ್ವಕವಿ ರವೀಂದ್ರನಾಥ ಠಾಕೂರರ ಅಭಿಪ್ರಾಯ. ವಿದ್ಯಾಭ್ಯಾಸ ಸ್ವಾಭಾವಿಕ ವಾತಾವರಣದೊಡನೆ ಸಂಬಂಧವಿದ್ದು ವಾಸ್ತವಿಕವಾಗಿರಬೇಕು. ಈ ಜಗತ್ತಿನಲ್ಲಿ ಜನ್ಮವೆತ್ತಿದವನನ್ನು ಜೀವಂತ ಗ್ರಾಮಫೋನುಗಳ ಲೋಕಕ್ಕೆ ಅಟ್ಟಬಾರದೆಂದೂ ಠಾಕೂರರು ಹೇಳಿದ್ದರು.

ಸರಿಯಾದ ಸಂದರ್ಭದಲ್ಲಿ ಓದು, ಬರೆಹ, ಲೆಕ್ಕ ಇವು ಪ್ರತಿಯೊಂದು ಪಾಠಕ್ರಮದಲ್ಲಿಯೂ ಸೇರುವುವು. ವಿದ್ಯಾರ್ಥಿಗಳು ವ್ಯಾಕರಣ ಕಲಿಯ



ಬೇಕು. ಹಾಗೆಂದು ಭಾಷೆಯನ್ನು ಬಿಟ್ಟು ಅದನ್ನು ಕಲಿಯಬೇಕಾಗಿಲ್ಲ. ಚರಿತ್ರಪಾಠ ಕೇವಲ ವಿಷಯಗಳ ಹಾಗೂ ತಾರೀಕುಗಳ ಪಟ್ಟಿಯಾಗ

ಬಾರದು. ರಸಾಯನಶಾಸ್ತ್ರ ಕೇವಲ ನೀರಸವಾದ ನಿಯಮಗಳನ್ನೇ ಕಲಿಸುವ ಬದಲು ಶುಚಿಯಾದ ನೀರಿನ ಪೂರೈಕೆಯ ಕುರಿತು ಕಲಿಸ ಬಲ್ಲದು. ಹೀಗೆ ಸಮಾಜಶಾಸ್ತ್ರ ವಿದ್ಯಾರ್ಥಿಗಳನ್ನು ಸಮಾಜ ಹಾಗೂ ದೇಶಕ್ಕೆ ಅತ್ಯುಪಯುಕ್ತರನ್ನಾಗಿ ಮಾಡಲು ಪ್ರಯತ್ನಿಸಬಲ್ಲದು.

ಶಿಕ್ಷಣಪದ್ಧತಿಯಲ್ಲಿ ಅಂಥ ಶಾಸ್ತ್ರಗಳ ಕಲಿಸುವಿಕೆಯು ಸಮಾಜಕ್ಕೆ ಬೇಕಾದ ವಾಸ್ತವಿಕ ವಿಷಯಗಳ ಬಗ್ಗೆ ಅನ್ವಯಿಸಿದರೆ ಮಕ್ಕಳ ಎಳೆ ಮನಸ್ಸು ವಿಕಾಸಹೊಂದುವುದಲ್ಲದೆ ಅವರ ಮೂಲಕ ದೊಡ್ಡವರ ದೃಷ್ಟಿ ಕೋನವೂ ಬಲವಾಗಿ ಪರಿವರ್ತನೆ ಹೊಂದುವುದು. ವಿದ್ಯಾರ್ಥಿಗಳು ಇತರರ ಸುಧಾರಣೆಗೆ ಸಹಾಯಕರಾಗಬಲ್ಲರೆಂಬುದರಲ್ಲಿ ಸಂದೇಹವಿಲ್ಲ. ಇಂಥ ಶಿಕ್ಷಣಪದ್ಧತಿ ಶಾಲೆಯನ್ನು ಸಮಾಜಜೀವನದ ಅಂಗವನ್ನಾಗಿ ಮಾಡುವುದು. ಇದರ ಪಾರಕ್ರಮದಲ್ಲಿ ಹಳ್ಳಿಗರ ಜೀವನ ಆಶೆ ಆಕಾಂಕ್ಷೆ ಗಳು ಪ್ರತಿಬಿಂಬಿತವಾಗುವವು. ಹೀಗೆಯೇ ಪಾರಕ್ರಮದಲ್ಲಿ ಅಡಕವಾದ ನಾನಾ ಚಟುವಟಿಕೆಗಳು ಹಳ್ಳಿಗರಲ್ಲಿ ಎದ್ದು ಕಾಣುವುವು.

ಶಾಲೆ ಸಮಾಜಜೀವನದಲ್ಲಿ ಸಂಪೂರ್ಣ ಬೆರೆಯಬೇಕಾದರೆ ಅದರ ಚಟುವಟಿಕೆಗಳಿಗೂ ಪಂಚಾಯತಿ ಸಹಕಾರಿ ಸಂಘಗಳ ಚಟುವಟಿಕೆ ಗಳಿಗೂ ಅನ್ಯೋನ್ಯ ಸಂಬಂಧವಿರಬೇಕು. ಸಹಕಾರಿ ಸಂಘಗಳು ಆರ್ಥಿಕ ಸಂಸ್ಥೆಗಳು. ಗ್ರಾಮಧುರೀಣತ್ವವನ್ನು ಅಭಿವೃದ್ಧಿಗೊಳಿಸಲು ಇವು ಸಹಾಯಮಾಡುತ್ತವೆ. ಬಡವ, ದೊಡ್ಡವರೆನ್ನದೆ ಉತ್ಪತ್ತಿಯ ಮತ್ತು ಲಾಭದ ಹೆಚ್ಚಳದ ಬಗ್ಗೆ ತಮ್ಮ ಸಾಧನಸಂಪತ್ತುಗಳನ್ನೆಲ್ಲ ಸಹಕಾರದ ಮೂಲಕ ಒಂದೆಡೆ ಶೇಖರಿಸಲು ಹಳ್ಳಿಗರೆಲ್ಲ ಒಂದಾಗುತ್ತಾರೆ. ಅತಿ ನಿಕಟ ಸಂಬಂಧವನ್ನು ಸ್ಥಾಪಿಸಿ ಶಾಲಾ ವಿದ್ಯಾರ್ಥಿಗಳು ಈ ಮೂರು ಮೂಲ ಸಂಸ್ಥೆಗಳಲ್ಲಿ ಕೆಲಸಮಾಡುವಂತೆ ಇವರನ್ನು ಪ್ರೋತ್ಸಾಹಿಸಲು ಸಾಧ್ಯವಿದೆ. ಉದಾಹರಣೆಗೆ ಶಾಲೆಯಲ್ಲೇ ಒಂದು ಚಿಕ್ಕ ಸಹಕಾರಿ ಅಂಗ-ಡಿಯನ್ನು ಏರ್ಪಡಿಸಬಹುದು. ಇದರಿಂದ ಮಕ್ಕಳು ತಮಗೆ ಬೇಕಾದ ಪುಸ್ತಕ, ಪೆನ್ಸಿಲು, ಸ್ಲೇಟು ಇತ್ಯಾದಿಗಳನ್ನು ಕೊಳ್ಳಬಹುದು. ಬರ-ಬರುತ್ತಾ ಇಂಥ ಅಂಗಡಿಗಳ ಆಡಳಿತೆ ಕೆಲಸವನ್ನು ಅವರಿಗೆ ಒಪ್ಪಿಸಲು ಸಾಧ್ಯವಿದೆ.

ಹೀಗೆಯೇ ಪಂಚಾಯತಿಯನ್ನು ಶಾಲೆಯಲ್ಲಿ ಆರಂಭಿಸಬಹುದು. ಇಂಥ ಪಂಚಾಯತಿ ದಿನದಿನದ ಚಟುವಟಿಕೆಗಳನ್ನು ನೋಡಿಕೊಳ್ಳುವುದಕ್ಕೆ ಪ್ರತಿನಿಧಿಗಳನ್ನು ಆರಿಸಿಕೊಂಡು ಕೆಲಸ ಮಾಡಬಲ್ಲದು. ಬೇರೆ ಬೇರೆ ತಜ್ಞ ಸಮಿತಿಗಳು ಇದಕ್ಕೆ ಸಹಾಯ ಮಾಡಬಹುದು.

ಶಾಲಾ ಚಟುವಟಿಕೆಗಳೊಡನೆ ಪಂಚಾಯತಿ ಚಟುವಟಿಕೆಗಳನ್ನು ಸೇರಿಸಿಕೊಳ್ಳಬಹುದು. ಏಕೆಂದರೆ ಅಭಿವೃದ್ಧಿಕಾರ್ಯಗಳೆಲ್ಲ ಪಂಚಾಯತಿಯ ಕೈಯಲ್ಲಿವೆ. ವಿದ್ಯಾಭ್ಯಾಸ, ಮಕ್ಕಳ, ತರುಣರ ಹಾಗೂ ಮಹಿಳೆಯರ ಏಳಿಗೆ ಇವೆಲ್ಲ ಅಭಿವೃದ್ಧಿಕಾರ್ಯಗಳಲ್ಲಿ ಸೇರಿವೆ. ಅಧ್ಯಾಪಕರ ಹಾಗೂ ಮಕ್ಕಳ ಸಹಕಾರದಿಂದ ಈ ಎಲ್ಲಾ ಚಟುವಟಿಕೆಗಳನ್ನು ಶಾಲೆಯಿಂದಲೇ ಆರಂಭಿಸಲು ಸಾಧ್ಯವಿದೆ. ಶಾಲಾ ಮಕ್ಕಳಲ್ಲಿ ನೈರ್ಮಲ್ಯದ ಅಭ್ಯಾಸವನ್ನು ಹೆಚ್ಚಿಸಲು ಮಹಿಳಾಮಂಡಲ ಸಹಾಯ ಮಾಡಬಲ್ಲದು. ವಿಹಾರ, ಶಾರೀರಿಕ ಶಿಕ್ಷಣ ಇತ್ಯಾದಿಗಳ ಏರ್ಪಾಡಿಗೆ ತರುಣ ಸಂಘಗಳು ಸಹಾಯ ನೀಡಬಲ್ಲುವು.

## ಶಾಲೆ— ಒಂದು ಜ್ಞಾನವಿಸ್ತರಣ ಸಾಧನ

ವಿದ್ಯಾರ್ಥಿಗಳು ಉತ್ತಮ ಹಾಗೂ ಉಪಯುಕ್ತ ಪ್ರಜೆಗಳಾಗುವಂತೆ ಮೊದಲು ಮೂಲಶಿಕ್ಷಣ ಕೆಲಸಮಾಡುತ್ತಿದೆ. ಸಮಾಜದ ಶಾಲೆಯ ಹಿತಕ್ಕಾಗಿ ಮಕ್ಕಳು ತಮಗೆ ಶಕ್ತಿಯಿದ್ದಷ್ಟು ಕೆಲಸಮಾಡುವ ಅವಕಾಶವನ್ನು ಈ ಶಿಕ್ಷಣಪದ್ಧತಿ ಒದಗಿಸುತ್ತದೆ. ಹಳ್ಳಿಯಲ್ಲಿ ಕಲಿತ ಹೊಸ ಕಸಬಿನಿಂದ ಹಳ್ಳಿಯ ಆರ್ಥಿಕಾಭಿವೃದ್ಧಿಗೆ ಸಹಾಯವಾಗುವುದು.

ಸಮಾಜದ ಸಹಕಾರದಿಂದ ಶಾಲೆ ಜ್ಞಾನಪ್ರಸಾರ ಕಾರ್ಯವನ್ನು ಸುಲಭವಾಗಿ ಮಾಡಬಲ್ಲದು. ಸಸಿ ನೆಡುವುದು, ತೋಟ ಬೆಳೆಸುವುದು ಇತ್ಯಾದಿ ಕೆಲಸಗಳನ್ನು ಪ್ರತಿ ಹಳ್ಳಿಯಲ್ಲೂ ಕೈಕೊಳ್ಳಬಹುದು. ಗೊಬ್ಬರದ ಹೊಂಡ ತಯಾರಿಸುವುದು, ರಾಸಾಯನಿಕ ಗೊಬ್ಬರದ ಪ್ರಯೋಗ, ಕುಡಿಯುವ ನೀರಿನ ಬಗ್ಗೆ ಬಾವಿ ಅಗೆಯುವುದು, ಇದ್ದ ಬಾವಿಯ ದುರಸ್ತಿ, ಮಳೆನೀರನ್ನು ಹೊರಹರಿಯಿಸಲು ಕಾಲುವೆ ಇತ್ಯಾದಿ ಕೆಲಸಗಳನ್ನು ಶಾಲೆ ಕೈಕೊಳ್ಳಬಹುದು. ಸಮೀಪದ ಹಳ್ಳಿಯ ಹೊಲಗಳನ್ನು

ಅಧ್ಯಾಪಕರು, ವಿದ್ಯಾರ್ಥಿಗಳು, ಶಿಕ್ಷಕರು ಒಟ್ಟಿಗೆ ಹೋಗಿ ನೋಡಿ ಬರಬಹುದು.

ಮೂಲಶಿಕ್ಷಣ ಶಾಲೆಗೆ ಭೂಮಿ ಇರುತ್ತದೆ. ಇದನ್ನು ಆಧುನಿಕ ಹೊಲವನ್ನಾಗಿ ಮಾರ್ಪಡಿಸಬಹುದು. ಹೊಸ ಸಲಕರಣೆಗಳನ್ನು ಇಲ್ಲಿ ಉಪಯೋಗಿಸಿ ತೋರಿಸಬಹುದು. ಮಕ್ಕಳ ರಕ್ಷಕರಿಗೆ, ಅಥವಾ ತಂದೆ ತಾಯಿಗಳಿಗೆ ಹೊಸ ಸಲಕರಣೆಗಳನ್ನು ಉಪಯೋಗಿಸಿದರೆ ಬೆಳೆ ಹೆಚ್ಚು-ವುದೆಂದು ಖಚಿತವಾದರೆ ಅವರಿಗೆ ಅಂಥ ಸಲಕರಣೆಗಳ ಉಪಯೋಗದಲ್ಲಿ ಆಸಕ್ತಿ ಹೆಚ್ಚುವುದು. ವಿದ್ಯಾರ್ಥಿಗಳು ತಮ್ಮ ಮನೆಗಳಲ್ಲಿ ಹಿತ್ತಲು ಬೆಳೆಸಬಹುದು. ಹೂಗಿಡಗಳನ್ನು ನೆಡಬಹುದು. ಕೋಳಿ ಸಾಕಬಹುದು. ಹೀಗೆಯೇ ಬೆಳೆಗಳನ್ನು ಒಂದರಮೇಲೊಂದಾಗಿ ಬೆಳೆಸುವುದು, ಸೀಮೆ ಗೊಬ್ಬರದ ಉಪಯೋಗ, ಕ್ರಿಮಿನಾಶಕ ಔಷಧಗಳ ಉಪಯೋಗ ಇತ್ಯಾದಿ ಗಳನ್ನೆಲ್ಲ ಜನಪ್ರಿಯಗೊಳಿಸಲು ಸಾಧ್ಯವಿದೆ.

ಇಂದಿನ ವಿದ್ಯಾರ್ಥಿಗಳೇ ಮುಂದಿನ ಧುರೀಣರು. ಅವರು ಹೊಸ ವಾತಾವರಣದಲ್ಲಿ ಬೆಳೆದು ಹೊಸ ಭಾವನೆಗಳನ್ನು ಹಬ್ಬಿಸಬಲ್ಲರು. (ಮಗನ್ ಚೂಲ ಹೊಗೆಯಿಲ್ಲದ ಒಲೆ,) ವಾರ್ಧಾಗಾಣ ಇತ್ಯಾದಿಗಳನ್ನು ವಿದ್ಯಾರ್ಥಿಗಳ ಮೂಲಕ ಹಳ್ಳಿಗಳಲ್ಲಿ ಪ್ರಚಾರಗೊಳಿಸಬಹುದು. ಮನೆಯಲ್ಲಿ ಹೊಸ ವಿಷಯಗಳನ್ನು ಆರಂಭಿಸಲು ತಮ್ಮ ತಂದೆ-ತಾಯಿಗಳ ಮೇಲೆ ಪ್ರಭಾವ ಬೀರಲು ವಿದ್ಯಾರ್ಥಿಗಳಿಗೆ ತುಂಬ ಸುಲಭ.

## ಸಮಾಜ ಮತ್ತು ಶಾಲೆ

ವಿದ್ಯಾರ್ಥಿಗಳು ಸ್ವಂತ ಅನುಭವದಿಂದ ಜ್ಞಾನ ಸಂಪಾದಿಸಿಕೊಳ್ಳ-ಬೇಕು. ಶಾಲೆ ಒಂದು ಚಿಕ್ಕ ಸಮಾಜವಾಗಿದೆ. ಇದು ಸಮಾಜದ ಮೇಲೆ ತನ್ನ ಪ್ರಭಾವ ಬೀರಿದಂತೆ ಸಮಾಜವೂ ಇದರ ಮೇಲೆ ಪ್ರಭಾವ ಬೀರುವುದು. ಆರೋಗ್ಯ ಜೀವನದ ಬಗ್ಗೆ ಶಾಲೆ ಒಂದು ಆದರ್ಶವಾಗಬಲ್ಲುದು. ಹಲ್ಲುಜ್ಜುವುದು, ತಲೆ ಬಾಚುವುದು, ಪಾಯಖಾನೆ, ಮೂತ್ರವಿಸರ್ಜನಾ ಸ್ಥಳಗಳನ್ನು ಉಪಯೋಗಿಸುವುದು ಇತ್ಯಾದಿ ಅಭ್ಯಾಸಗಳನ್ನು ವಿದ್ಯಾರ್ಥಿಗಳು ಮನೆಗಳಲ್ಲಿಯೂ ರೂಢಿಗೆ ತರಬಹುದು. ಇದು ಹಿರಿಯರ ಮನಸ್ಸಿನಲ್ಲಿಯೂ ಪರಿಣಾಮ ತರಬಲ್ಲುದು.

ಚಿಕ್ಕ ರೀತಿಯಲ್ಲಿ ಹಳ್ಳಿಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯ ಪರಿಶೀಲನೆಯನ್ನು ವಿದ್ಯಾರ್ಥಿಗಳೇ ನಡೆಸಿದ ಸಂದರ್ಭಗಳಿವೆ. ಹಳ್ಳಿಗಳಲ್ಲಿ ಶಾಲೆಗೆ ಹೋಗುವ ವಯಸ್ಸಿನ ಅನೇಕ ಮಕ್ಕಳು ಬಡತನದಿಂದಾಗಿ ಶಾಲೆಗೆ ಹೋಗಲು ಶಕ್ತರಾಗಿಲ್ಲ. ವಿದ್ಯಾರ್ಥಿಗಳು ಇಂಥ ಬಡ ಮಕ್ಕಳಿಗೆ ಅನ್ನ-ವಸ್ತ್ರ ಕೊಟ್ಟು ಶಿಕ್ಷಣ ದೊರಕಿಸಲು ಸಮಾಜವನ್ನು ಒತ್ತಾಯಿಸಬಹುದು. ಅಲ್ಲದೆ ಅಲ್ಪ-ಸ್ವಲ್ಪ ಕೆಲಸಮಾಡಿ ತಮ್ಮ ತಂದೆ-ತಾಯಿಗಳಿಗೆ ಸಹಾಯ ಮಾಡುತ್ತಿರುವ ಮಕ್ಕಳ ಬಗ್ಗೆ ರಾತ್ರಿಶಾಲೆಗಳನ್ನು ಆರಂಭಿಸಿ ಓದು-ಬರಹ ಕಲಿಸಬಲ್ಲರು. ವಯಸ್ಕಶಿಕ್ಷಣ ತರಗತಿಗಳನ್ನು ಪ್ರಾರಂಭಿಸಿ ಹಳ್ಳಿಗರೊಡನೆ ಬೆರೆಯುವುದರಿಂದ ಅವರ ಸಮಸ್ಯೆಗಳನ್ನು ಚೆನ್ನಾಗಿ ತಿಳಿಕೊಳ್ಳಬಲ್ಲರು.

## ಶಾಲೆಯೇ ಗ್ರಾಮಜೀವನದ ಕೇಂದ್ರ

ಶಾಲೆ ಗ್ರಾಮಜೀವನದ ಅವರಲ್ಲೂ ಸಾಂಸ್ಕೃತಿಕ ಜೀವನದ ಕೇಂದ್ರವಾಗಬಲ್ಲದು. ಧಾರ್ಮಿಕ ಚರ್ಚೆ, ಹರಿಕಥೆ, ಇತ್ಯಾದಿಗಳಲ್ಲಿ ಹಿರಿಯರು ಮಕ್ಕಳೊಂದಿಗೆ ಬೆರೆಯುವುದರಿಂದ ಸಮಾಜ ಜೀವನವು ಆರೋಗ್ಯದಿಂದಿರುವಂತಾಗುವುದು. ರಾಷ್ಟ್ರೀಯ ಸಂಸ್ಕೃತಿಯ ವಿವರಣೆ ಹಾಗು ಪ್ರಚಾರದ ಬಗ್ಗೆ ಶಾಲೆ ಅತ್ಯುತ್ತಮ ಸಾಧನ. ನಮ್ಮ ಗತವೈಭವವನ್ನು ನಾವೆಂದೂ ನಿರ್ಲಕ್ಷಿಸಲಾರೆವು.

ಹಳ್ಳಿಗಳಲ್ಲಿ ಸಾಮಾಜಿಕ ಸುಧಾರಣೆಗೂ ಶಾಲೆಯಿಂದ ತುಂಬ ಪ್ರಯೋಜನವಿದೆ. ಜಾತಿ ಮತ ಪಂಥಗಳ ಭೇದವಿಲ್ಲದೆ ಎಲ್ಲ ವಿದ್ಯಾರ್ಥಿಗಳೂ ಇಲ್ಲಿ ಒಟ್ಟು ಸೇರುತ್ತಾರೆ. ಒಟ್ಟಿಗೆ ಆಡುತ್ತಾರೆ, ಒಟ್ಟಿಗೆ ಓದುತ್ತಾರೆ, ಒಟ್ಟಿಗೆ ಕುಳಿತು ಊಟಮಾಡುತ್ತಾರೆ. ಇವರಿಗೆಲ್ಲ ಅಡಿಗೆಯ ಏರ್ಪಾಡೂ ಒಂದೇ. ಇದರಿಂದ ಹಳ್ಳಿಗರು ಜಾತಿಮತಗಳ ಗೋಡೆಗಳನ್ನು ದಾಟಿ ಹೊರಬರಲು ಶಕ್ತರಾಗಬಲ್ಲರು.

## ಕತ್ತಲೆಯನ್ನು ತೊಲಗಿಸುವುದು

ಶಾಲೆ ಅಜ್ಞಾನದ ಕತ್ತಲೆಯನ್ನು ತೊಲಗಿಸಿ ಜ್ಞಾನದ ಬೆಳಕನ್ನು

ಎಲ್ಲೆಲ್ಲೂ ಬೀರಬಲ್ಲುದು. ಮಾನವನಲ್ಲಿ ಜ್ಞಾನದ ಭಾಂಡಾರವೇ ಅಡಗಿಕೊಂಡಿದೆ. ಹುಡುಗನಲ್ಲಿಯೂ ಇದು ಅಡಗಿದೆ. ಇದನ್ನು ಹೊರತರಲು ಎಚ್ಚರಗೊಳಿಸುವುದು ಅಧ್ಯಾಪಕನ ಕರ್ತವ್ಯವೆಂದು ಸ್ವಾಮಿ ವಿವೇಕಾನಂದರ ಅಭಿಪ್ರಾಯ.

ಶಾಲೆಗೆ ಹಳ್ಳಿಯಲ್ಲಿ ಪುಸ್ತಕಭಾಂಡಾರವನ್ನು ಏರ್ಪಡಿಸಲು ಸಾಧ್ಯವಿದೆ. ಈ ಬಗ್ಗೆ ಈಗಾಗಲೇ ಸರಕಾರ ಒಂದು ಯೋಜನೆ ತಯಾರಿಸಿದೆ. ಇಂಥ ಯೋಜನೆಯ ಸಹಾಯದಿಂದ ಪುಸ್ತಕ ಭಾಂಡಾರದ ಕಟ್ಟಡ, ಪುಸ್ತಕ ಇತ್ಯಾದಿಗಳ ಬಗ್ಗೆ ಸರಕಾರದಿಂದ ಸಹಾಯಧನ ಪಡಕೊಳ್ಳಲು ಸಾಧ್ಯವಿದೆ. ಇದರ ಆಡಳಿತೆ ಶಾಲೆಯ ಕೈಯಲ್ಲೇ ಇರುವುದು. ವಿದ್ಯಾರ್ಥಿಗಳಿಗೆ



ಮಾತ್ರವಲ್ಲ, ಸುತ್ತಮುತ್ತಲ ಹಳ್ಳಿಗರಿಗೂ ಈ ಪುಸ್ತಕ ಭಾಂಡಾರದಿಂದ ಪುಸ್ತಕಗಳನ್ನು ಕೊಡಲಾಗುವುದು. ವಿದ್ಯಾರ್ಥಿಗಳು ಶಾಲೆಬಿಟ್ಟ ಮೇಲೂ ತಮ್ಮ ಶಾಲೆಯನ್ನು ನೆನಸಲು ಪುಸ್ತಕಭಾಂಡಾರ ಒಂದು ಅತ್ಯುತ್ತಮ ಸಾಧನ.

**ಅಧ್ಯಾಪಕ**

ಶಾಲೆಗೆ ತನ್ನ ಹೊಸ ಸ್ಥಾನ ಬರಬೇಕಾದರೆ ಅಧ್ಯಾಪಕನಿಗೆ ಸಮಾಜದಲ್ಲಿ ಯೋಗ್ಯ ಸ್ಥಾನ ದೊರಕಿಸಬೇಕು. ಅಧ್ಯಾಪಕನಿಗೆ ಈಗ ಮೊದಲಿನಷ್ಟು ಮನ್ನಣೆ ದೊರೆಯುತ್ತಿಲ್ಲ. ಆತನಿಗೆ ಹಿಂದಿನ ಸ್ಥಾನ-ಮಾನಗಳನ್ನು ದೊರಕಿಸುವುದು ಅಗತ್ಯ. ಆತನೂ ತನ್ನ ಹೊಸ ಪಾತ್ರವನ್ನು ತಿಳಿದು ಹಳ್ಳಿಗರ ಮಾರ್ಗದರ್ಶಕನಾಗಿ ಕೆಲಸ ಮಾಡಬೇಕು.

ಅಧ್ಯಾಪಕನಿಗೆ ಸ್ಫೂರ್ತಿ ಹುಟ್ಟಿಸಬೇಕು. ಸರಿಯಾಗಿ ಆತನನ್ನು ಪ್ರೋತ್ಸಾಹಿಸಿದರೆ ಆತ ಅದ್ಭುತ ಕೆಲಸಮಾಡಬಲ್ಲ. "ತಾನು ಅಭ್ಯಾಸ ಮಾಡದೆ ಅಧ್ಯಾಪಕ ಇತರರಿಗೆ ಕಲಿಸಲಾರ. ತಾನು ಉರಿಯದೆ ದೀಪ ಇನ್ನೊಂದು ದೀಪವನ್ನು ಉರಿಸಲಾರದು." ಎಂದು ಠಾಕೂರರು ಹೇಳಿದ್ದಾರೆ.

ಕೆಲವರು ಹುಟ್ಟು ಉಪಾಧ್ಯಾಯರು. ಇನ್ನು ಕೆಲವರು ಯೋಗ್ಯತೆ ಪಡೆದ ಉತ್ತಮ ಉಪಾಧ್ಯಾಯರು. ಅಧ್ಯಾಪಕರನ್ನು ಸಮಾಜವಿಕಾಸದ ಕೆಲಸ ಮಾಡುವುದಕ್ಕೆ ಸಿದ್ಧರಾಗುವಂತೆ ಮಾಡಲು ಒಂದು ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ. ಅಧ್ಯಾಪಕರಿಗೆ ಪಂಚವಾರ್ಷಿಕ ಯೋಜನೆಯಲ್ಲಿ ಅಡಕವಾದ ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳ ಕುರಿತು ಬೇಕಾದ ಅನುಭವ ದೊರಕಿಸುವುದೇ ಈ ತರಬೇತಿಯ ಉದ್ದೇಶ. ಅಧ್ಯಾಪಕರು ಜ್ಞಾನವಿಸ್ತರಣ ಪದ್ಧತಿಗಳನ್ನು ಕಲಿತು ಶಾಲೆ ಸಮಾಜಕೇಂದ್ರವಾಗಿ ವಹಿಸಬೇಕಾದ ಪಾತ್ರವನ್ನು ತಿಳಿಕೊಳ್ಳುತ್ತಾರೆ. ಸಮಾಜಕ್ಕೆ ನೇರಾಗಿ ಪ್ರಯೋಜನವುಳ್ಳ ವಿಷಯಗಳನ್ನು ಕಲಿಸಲು ಪ್ರೋತ್ಸಾಹಿಸಲಾಗುತ್ತಿದೆ. ಈ ತರಬೇತಿ ಅಧ್ಯಾಪಕರಲ್ಲಿ ಹೊಸ ದೃಷ್ಟಿಕೋನವನ್ನುಂಟು ಮಾಡುವುದರಲ್ಲಿ ಯಶಸ್ವಿಯಾಗಿದೆ. ಹೀಗೆ ಪಂಚಾಯತಿ ಒಂದು ಶಾಸನಬದ್ಧವಾದ ಆಡಳಿತೆ ಸಂಸ್ಥೆಯಾಗಿ ಧುರೀಣರನ್ನು ತಯಾರುಮಾಡಿದರೆ ಸಹಕಾರಿ ಸಂಘ ಸಮಾಜದ ಆರ್ಥಿಕ ಅವಶ್ಯಕತೆಗಳನ್ನು ನೋಡಿಕೊಳ್ಳುತ್ತದೆ. ಶಾಲೆ ಸಾಂಸ್ಕೃತಿಕ ಕೇಂದ್ರವಾಗಿ ಕಾರ್ಯಕ್ಷೇತ್ರಗಳಲ್ಲೆಲ್ಲಾ ಚೈತನ್ಯವನ್ನು ಹಬ್ಬಿಸುತ್ತದೆ. ಹಳ್ಳಿಗಳಲ್ಲಿ ಈ ಮೂರು ಮೂಲ ಸಂಸ್ಥೆಗಳಿಗೆ ಸಹಾಯ ನೀಡಲು ಇತರ ಅನೇಕ

ಸಂಘಸಂಸ್ಥೆಗಳೂ ಇರುವುವು. ಹೀಗೆಯೇ ಬ್ಲಾಕ್, ಜಿಲ್ಲಾ, ರಾಜ್ಯ, ರಾಷ್ಟ್ರಗಳ ಹಂತದಲ್ಲಿಯೂ ಇಂಥ ಸಂಸ್ಥೆಗಳು ಒಂದಕ್ಕೊಂದು ಸಹಾಯಕವಾಗಿ ಕೆಲಸಮಾಡುವುವು. ಈ ಸಂಸ್ಥೆಗಳೆಲ್ಲ ಒಟ್ಟಾಗಿ ಪ್ರಯತ್ನಿಸಿದರೆ ಪ್ರಜಾಪ್ರಭುತ್ವ ಯಶಸ್ವಿಯಾಗಿ ನಿಜವಾದ ಸುಖೀ ರಾಜ್ಯದ ಸ್ಥಾಪನೆಯಾಗುವುದರಲ್ಲಿ ಸಂದೇಹವಿಲ್ಲ.

ಸರ್ವೇ ಜನಾಃ ಸುಖಿನೋ ಭವಂತು

